

# ಶ್ರೀ ಪಾತಂಜಲಿ ಯೋಗಸೂತ್ರಗಳು





ಗ್ರಂಥಕರ್ತ

ಪುರಾಣಂ ಲಕ್ಷ್ಮೀಪತಿ ಶರ್ಮ

---

ಬೆಂಗಳೂರು :

ವಿ. ನೈಡ್ ಅಂಡ್ ಕಂಪನಿ, ಪವರ್ ಪ್ರೆಸ್ಸಿನಲ್ಲಿ
ಮುದ್ರಿತವಾಗಿದೆ.

ಪ್ರಥಮ ಮುದ್ರಣ, 1,000 ಪ್ರತಿಗಳು.

1939

 [ಬೆಲೆ, 0—12—0

# ಭೂ ಮಿ ಕೆ.

ಮಹಾಶಯರೆ !

ನಮ್ಮ ಭರತಖಂಡದಲ್ಲಿ ಆತ್ಮೋನ್ನತಿ ಹೊಂದಬೇಕಾದರೆ ಪೂರ್ವಜರಾದ ನಮ್ಮ ಮಹರ್ಷಿಗಳು ಅನೇಕ ಗ್ರಂಥಗಳನ್ನು ಬರೆದು ಲೋಕೋಪಕಾರ ಮಾಡಿರುವ ವಿಷಯ ವಾಚಕಮಹಾಶಯರ ಅವಗಾಹನೆಗೆ ಬಂದಿದೆಯೆಂಬ ವಿಷಯ ಬೇರೆ ಹೇಳಬೇಕಾಗಿಲ್ಲ. ಅಂಥ ಮಹರ್ಷಿಗಳಲ್ಲಿ 'ಪತಂಜಲಿ' ಎಂಬ ಋಷಿಸತ್ತಮರು ಚಿತ್ತೈಕಾಗ್ರತೆಯನ್ನು ಹೊಂದಿ ಪ್ರಕೃತಿಯನ್ನು ಜಯಿಸಿ ಸ್ವರೂಪದರ್ಶನವನ್ನು ಪಡೆದು ನಿರತಿಶಯಾನಂದವನ್ನು ಸಂಪಾದಿಸಲು ೧೯೫ ಸೂತ್ರಗಳನ್ನು ಯೋಗಪಾದ, ಸಾಧನಪಾದ, ವಿಭೂತಿಪಾದ, ಕೈವಲ್ಯಪಾದಗಳೆಂದು ನಾಲ್ಕು ಭಾಗಗಳಾಗಿ ವಿಂಗಡಿಸಿದ್ದಾರೆ.

ಈ ನಾಲ್ಕು ಪಾದಗಳಲ್ಲಿರತಕ್ಕ ಸೂತ್ರಗಳನ್ನು, ಅದರ ತಾತ್ಪರ್ಯವನ್ನು ಮತ್ತು ಅದರ ವಿವರಣೆಯನ್ನು ಗ್ರಹಿಸಿ ಮತ್ತು ಗುರುಮುಖವಾಗಿಯೂ, ಅನುಭವವನ್ನು ಪಡೆದು, ಆಚರಣೆಯ ಬಲದಿಂದ ಸಮಾಧಿ ಯೋಗದ್ವಾರ ಆತ್ಮಸಾಕ್ಷಾತ್ಕಾರವನ್ನು ಹೊಂದಿ, ಜನನಮರಣರೂಪ ಪ್ರವಾಹ ದುಃಖದಿಂದ ಪಾರಾಗುವುದಕ್ಕೆ ಬಹಳ ಉಪಯುಕ್ತವಾದದ್ದಾಗಿದೆ. ಆದುದರಿಂದ ಪಾಠಕಮಹಾಶಯರು ಉತ್ತಮ ಪ್ರಯೋಜನವನ್ನು ಹೊಂದಬೇಕೆಂದು ಹೇಳುತ್ತೇವೆ.

ಇಂಥ ಪವಿತ್ರ ಗ್ರಂಥಕ್ಕೆ ಪ್ರೋತ್ಸಾಹವನ್ನು ಕೊಟ್ಟು ಮುದ್ರಣಕ್ಕೆ ಧನಸಹಾಯ ಮಾಡಿದ ಶ್ರೀಯುತ ಗಾರ್ಲ ನಾರಾಯಣ ಶ್ರೇಷ್ಠಿಯವರಿಗೆ ಧನ್ಯವಾದಗಳನ್ನು ಹೇಳುವ.

ಪುರಾಣಂ ಲಕ್ಷ್ಮೀಪತಿ ಶರ್ಮ,
ಕೋದಂಡರಾಮಾಲಯ,
ಬೆಂಗಳೂರು ಹೊಸೂರು ರೋಡ್, 15 ಮೈಲಿ.

# ಪಾತಂಜಲಿ ಯೋಗಸೂತ್ರ

## ಯೋಗಪಾದ

ಶ್ಲೋ॥ ದೇಹಾರ್ಥಯೋಗ ಶ್ಶಿವಯೋ ಸ್ಸಶ್ರೇಯಾಂಸಿ ತನೋತುವಃ ।
ದುಷ್ಪ್ರಾಪ್ಯಮಪಿ ಯತ್ಸ್ಮೃತ್ವಾ ಜಪಕೈವಲ್ಯ ಮಶ್ನುತೇ ॥

**ಅವತಾರಿಕೆ**

ಸಕಲ ಪುರುಷಾರ್ಥಪ್ರದಮಾದ ಯೋಗಶಾಸ್ತ್ರವನ್ನುಪದೇಶ ಮಾಡಬೇಕೆಂದು ನಿಶ್ಚಯಿಸಿದಂತ ಪರಮ ದಯಾಸ್ವರೂಪನಾದ ಪತಂಜಲಿ ಮುನೀಂದ್ರರು ಮಂಗಳಾಚರಣ ಪೂರ್ವಕವಾಗಿ ಗ್ರಂಥವನ್ನುಪಕ್ರಮಿಸಿದ್ದಾರೆ.

೧. ಸೂ॥ ಅಥ ಯೋಗಾನುಶಾಸನಮ್

ತಾತ್ಪರ್ಯ :—ಅನಂತರ ಯೋಗದ ಸ್ವರೂಪ ಲಕ್ಷಣವನ್ನು ಹೇಳುತ್ತಾರೆ.

ವಿಶೇಷಾರ್ಥ :—ಅಥ ಶಬ್ದವು ಮಂಗಳಾರ್ಥವನ್ನು, ಶಾಸ್ತ್ರ ಪ್ರಾರಂಭವನ್ನು ಅಧಿಕಾರ ಪ್ರಾಪ್ತ್ಯನಂತರ ಕಾಲವನ್ನು ಕೂಡ ಸೂಚಿಸುತ್ತದೆ. ಆದಕಾರಣ ಮಂಗಳಾಚರಣ ಮೂಲಕವಾಗಿ ಅಧಿಕಾರರಿಗೆ ಯೋಗಸ್ವರೂಪವನ್ನು ಅವುಗಳ ಸಾಧನೆಗಳನ್ನು ಅದರ ಫಲವಾದ ಕೈವಲ್ಯವನ್ನು ಹೇಳಲ್ಪಡುತ್ತದೆ. ಅಂದರೆ ಅಧಿಕಾರಿಗಳಿಗೆ ನಿರತಿಶಯಾನಂದ ಕೈವಲ್ಯ ಸ್ವರೂಪ ಪ್ರಾಪ್ತಿ,

ಯೋಗ ಲಕ್ಷಣ ಸ್ವರೂಪ ಭೇದೋಪಾಯಾದಿಗಳಿಂದ ಗೂಡಿದ ಈ ಯೋಗ ಶಾಸ್ತ್ರವು ವಿವರಿಸಲ್ಪಡುತ್ತದೆ.

೨. ಸೂ|| ಯೋಗಶ್ಚಿತ್ತವೃತ್ತಿ ನಿರೋಧಃ |

ತಾ|| ಅಂತಃಕರಣದ ವೃತ್ತಿಗಳನ್ನು ನಿಗ್ರಹಿಸುವುದಕ್ಕೆ ಯೋಗ ವೆಂದು ಹೆಸರು.

ವಿ|| ಸಮಸ್ತ ವ್ಯವಹಾರಗಳಿಗೆ ಯೋಗ್ಯವಾದ ಚಿತ್ತವೃತ್ತಿಗಳ ಪರಿಣಾಮ ರೂಪ ಧರ್ಮಗಳನ್ನು ನಿಗ್ರಹಿಸುವುದೇ ಯೋಗವು. "ನಿಗ್ರಹವೆಂದರೆ" ಚಿತ್ತ ವೃತ್ತಿಗಳ ಲಯಕ್ಕೆ ಕಾರಣವಾಗಿರತಕ್ಕ ಅಗೋಚರವಾದ ಪ್ರಯತ್ನವು.

ವೃತ್ತಿಗಳನ್ನು ಬಾಹ್ಯಕ್ಕೆ ಪ್ರಸರಿಸದೆ ಅಂತರ್ಮುಖವಾಗುವಂತೆ ಮಾಡಿ ಚಿತ್ತವನ್ನು ಲಯಿಸುವುದೇ ಯೋಗವು=ಅಥವ ಸಮಾಧಿ.

ಚಿತ್ತವೆಂದರೆ ನಿರ್ಮಲವಾಗಿರತಕ್ಕ ಸತ್ತ್ವಗುಣ ಪರಿಣಾಮದ ಅಂತಃ ಕರಣ=ಅಥವ ಚಿತ್ತ ಪರಿಣಾಮ ರೂಪ.

೧. ಚಿತ್ತವು ಪಂಚಾವಸ್ಥೆಗಳಲ್ಲಿ ಸೇರಿದೆ. ರಜೋಗುಣ ಪ್ರಧಾನವಾಗಿ ಸುಖ ದುಃಖಾದಿ ವಿಷಯಗಳಲ್ಲಿ ಪ್ರವರ್ತಿಸಿ ಕೇವಲ ಅಸ್ಥಿರವಾಗಿರತಕ್ಕ ಚಿತ್ತಕ್ಕೆ (ಕ್ಲಿಪ್ತ) ವೆಂದು ಹೆಸರು. ಇದು ದೈತ್ಯ ದಾನವರಿಗೆ ಇರುತ್ತದೆ.

೨. ತಮೋಗುಣ ಪ್ರಧಾನವಾಗಿ ಕೃತ್ಯಾಕೃತ್ಯ ವಿಮರ್ಶನಾ ಜ್ಞಾನ ವಿವೇಚನೆ ಯಿಲ್ಲದೆ ಕ್ರೋಧಾದಿ ಕಾರ್ಯಗಳಲ್ಲಿ ಪ್ರವರ್ತಿಸಿದ ಚಿತ್ತಕ್ಕೆ (ಮೂಢ) ವೆಂದು ಹೆಸರು. ಇದು ಪಿಶಾಚ ರಾಕ್ಷಸರಿಗೆ ಇರುವುದು.

೩ ಸತ್ತ್ವ ಗುಣಾಧಿಕ್ಯವಾಗಿ ಭೋಗ ಸಾಧನಗಳಲ್ಲಿ ಪ್ರವರ್ತಿಸಿದ ಚಿತ್ತಕ್ಕೆ (ವಿಕ್ಷಿಪ್ತ)ವೆಂದು ಹೆಸರು. ಇದು ದೇವತೆಗಳಿಗೆ ಇರುತ್ತದೆ.

೪. ಬಾಹ್ಯದಲ್ಲಿ ಪ್ರಸರಿಸದೆ ಇರುವ ಚಿತ್ತಕ್ಕೆ ಏಕಾಗ್ರವೆಂದು ಹೆಸರು.

೫. ವೃತ್ತಿ ಮತ್ತು ಸಂಸ್ಕಾರಗಳು ಇಲ್ಲದೆ ಇರುವ ಚಿತ್ತಕ್ಕೆ ನಿರುದ್ಧವೆಂದು ಹೆಸರು "ಏಕಾಗ್ರ ಮತ್ತು ನಿರುದ್ಧ"ಗಳೆಂಬ ಎರಡು ಮಾತ್ರವೆ ಸಮಾಧಿ ಯನ್ನು ಕೂಡಿಸುತ್ತದೆ.

**ಅ|| ಸಮಾಧಿ ಕಾಲದಲ್ಲಿ ಆತ್ಮಸ್ವರೂಪವನ್ನು ಬೋಧಿಸುತ್ತಾರೆ.**

೩. ಸೂ|| ತದಾ ದ್ರಷ್ಟು ಸ್ವರೂಪಾಽವಸ್ಥಾನಮ್ ||

ತಾ|| ಚಿತ್ತವೃತ್ತಿಗಳು ನಿಗ್ರಹವಾಗಿರುವ (ಯೋಗಾವಸ್ಥೆಯಲ್ಲಿ ರುವ) ಕಾಲದಲ್ಲಿ ಚಿನ್ಮಾತ್ರನಾದ ಪುರುಷನು ನಿಜಸ್ವರೂಪದಲ್ಲಿರುತ್ತಾನೆ.

ವಿ|| ಪುರುಷನಿಗೆ ಜ್ಞಾನವೇ ಸ್ವರೂಪವು. ಬುದ್ಧಿಯೆಂಬ ವಸ್ತುವಿನಲ್ಲಿ ಜ್ಞಾನವು ಸೇರಿದರೆ ಬುದ್ಧಿ ತತ್ತ್ವವು ಕೆಲಸಗಳನ್ನು ಮಾಡುವುದು. ಪುರುಷನು ಯಾವಾಗಲೂ ಸಂಸೃತಿಯಲ್ಲಿ ಸಿಕ್ಕದೆ ಇರುವವನು. ಪುರುಷ, ಪ್ರಕೃತಿ ಈ ಎರಡು ಬೇರೆ ಬೇರೆ ಎಂಬ ಜ್ಞಾನವುಂಟಾದರೆ ಜ್ಞಾನವು ಬುದ್ಧಿಯಲ್ಲಿ ಸಂಕ್ರಮಿಸದು. ಒಂದುವೇಳೆ ಸಂಕ್ರಮಿಸಿದರೆ ನಾನು ಎಂಬ ಅಭಿಮಾನವು ಹೋಗುತ್ತದೆ. ಆಮೇಲೆ ಬುದ್ಧಿವಿಕಾರವು ಹೋಗುತ್ತದೆ. ಬುದ್ಧಿವಿಕಾರ ಹೋದಮೇಲೆ, ಆತ್ಮನು ನಿಜ ಸ್ವರೂಪದಲ್ಲಿರುವನು.

**ಅ|| ಬಹಿರ್ಮುಖ ಕಾಲದಲ್ಲಿ ಆತ್ಮಸ್ವರೂಪವನ್ನುಪದೇಶಿಸುತ್ತಾರೆ.**

ಳ. ಸೂ|| ವೃತ್ತಿ ಸಾರೂಪ್ಯ ಮಿತರತ್ರ |

ತಾ|| ಸಮಾಧಿಯಿಂದ ಬಹಿರ್ಮುಖವಾದ (ಯೋಗವಿಲ್ಲದ) ಕಾಲದಲ್ಲಿ ಆತ್ಮನು ವೃತ್ತಿಗಳ ಸಮಾನಸ್ವರೂಪವನ್ನು ಹೊಂದಿರುತ್ತಾನೆ.

ವಿ|| ಯೋಗವಿಲ್ಲದ ದಶೆ ವ್ಯುತ್ಥಾನದಶೆ. ಇಂಥ ವ್ಯುತ್ಥಾನ ದಶೆಯಲ್ಲಿ ವೃತ್ತಿಗಳು ಹುಟ್ಟುತ್ತವೆ. ಚಿತ್ತವು ಗುಣಪರಿಣಾಮ ಭೇದದಿಂದ ಅಂತಃಕರಣಗಳಲ್ಲಿ ಇಂದ್ರಿಯಗಳ ಮಾರ್ಗವಾಗಿ ಬಾಹ್ಯದಲ್ಲಿರತಕ್ಕ ನಾನಾ ವಿಷಯಗಳಲ್ಲಿ ಪ್ರವರ್ತಿಸುತ್ತದೆ.

ಆಗ ಚಿನ್ಮಾತ್ರನಾದ ಪುರುಷನು ಆ ಚಿತ್ತದಂಥ ಆಕಾರವುಳ್ಳವನ ಹಾಗೆ ಭಾವಿಸಲ್ಪಡುವನು. ಅಂದರೆ ದುಃಖ ಮೋಹ (ಅಜ್ಞಾನ) ಸುಖರೂಪವಾಗಿ ವೃತ್ತಿಗಳು ಹುಟ್ಟಿದ ಹಿಂದೆಯೇ ಪುರುಷನು ಆ ದುಃಖಾದಿಗಳೇ ಸ್ವರೂಪನಾಗಿರತಕ್ಕವನಾಗಿ ವ್ಯವಹರಿಸಲ್ಪಡುತ್ತಾನೆ. ಅದು ಹೇಗೆಂದರೆ, ಚಂದ್ರನು ಕದಲುತ್ತಿರುವ ನೀರಿನ ಅಲೆಗಳಲ್ಲಿ ಕಾಣುತ್ತಿರುವಾಗ ಆ ಚಂದ್ರನು ಅಲೆಗಳ ಹಾಗೆ ಕದಲುತ್ತಿರುವುದು ಹೇಗೆ ಕಾಣಿಸುತ್ತದೆಯೋ ಅದೇ ರೀತಿಯಾಗಿ ಚಿನ್ಮಾತ್ರನಾದ ಪುರುಷನು ಭಾವಿಸಲ್ಪಡುತ್ತಾನೆ.

**ಅ|| ಚಿತ್ತವೃತ್ತಿಗಳನ್ನು ಅವುಗಳ ಭೇದಗಳನ್ನು ಹೇಳುತ್ತಾರೆ.**

೫. ಸೂ|| ವೃತ್ತಯಃ ಪಂಚತಯ್ಯಃ ಕ್ಲಿಷ್ಟಾಽಕ್ಲಿಷ್ಟಾಃ ||

ತಾ|| ಕ್ಲೇಶಗಳುಳ್ಳದ್ದು ಕ್ಲೇಶಗಳಿಲ್ಲದೆ ಇರತಕ್ಕದ್ದೆಂದು ಚಿತ್ತವೃತ್ತಿಗಳು ಐದು ವಿಧ.

ವಿ|| ವೃತ್ತಿಗಳೆಂದರೆ ಚಿತ್ತ ಪರಿಣಾಮ ವಿಶೇಷಗಳು. ಕ್ಲೇಶಗಳಿಗೆ ಅಥವ ದುಃಖಗಳಿಗೆ ಕಾರಣವಾಗಿರತಕ್ಕವು—ಕ್ಲಿಷ್ಟಗಳು, ಅಕ್ಲೇಶಗಳಿಗೆ, (ಸುಖಗಳಿಗೆ)

ಕಾರಣವಾಗಿರುವುದೇ ಅಕ್ಲಿಷ್ಟಗಳು. ಇವುಗಳನ್ನು ಕುರಿತು ವಿಶೇಷವಾಗಿ ಸಾಧನ ಪಾದದ ಮೂರನೇಯ ಸೂತ್ರದಲ್ಲಿ ವಿವರಿಸಲ್ಪಡುವುದು.

**ಅ॥ ಚಿತ್ತವೃತ್ತಿಯ ವಿವರಣೆಯನ್ನು ಹೇಳುತ್ತಾರೆ**

೬. ಸೂ॥ ಪ್ರಮಾಣ ವಿಪರ್ಯಯ ವಿಕಲ್ಪ ನಿದ್ರಾಸ್ಮೃತಯಃ ॥

ತಾ॥ (ವೃತ್ತಿಗಳು) ಪ್ರಮಾಣವೃತ್ತಿ, ವಿಪರ್ಯಯವೃತ್ತಿ, ವಿಕಲ್ಪ ವೃತ್ತಿ, ನಿದ್ರಾವೃತ್ತಿ, ಸ್ಮೃತಿವೃತ್ತಿಯೆಂದು ಐದು ವಿಧಗಳು.

ವಿ॥ ಇಲ್ಲಿ ಕೆಲವರು ಸ್ವಪ್ನವೃತ್ತಿಯನ್ನು ಹೇಳಲಿಲ್ಲವೆಂದು ಕೆಲವರಿಗೆ ಶಂಕೆ ತೋರುವುದು. ಸ್ಮೃತಿವೃತ್ತಿಯಲ್ಲಿಯೇ ಸ್ವಪ್ನವೃತ್ತಿಯು ಸೇರಿದೆಯೆಂದು ಗ್ರಹಿಸಬೇಕು. ವೃತ್ತಿಯೆಂದರೆ, ಕೆರೆಯಲ್ಲಿರುವ ನೀರು ತೂಬಿನ ಮಾರ್ಗ ವಾಗಿ ಚೌಕವಾಗಿಯೂ, ತ್ರಿಕೋಣವಾಗಿಯೂ ಗದ್ದೆಗಳ ಪಾದಿಗಳಲ್ಲಿ ಹರಿ ಯುವಾಗ ಯಾವ ರೀತಿ ಆಯಾ ಪಾದಿಗಳ ಆಕಾರವಾಗಿ ನಿಂತಿರುತ್ತದೆಯೋ ಹಾಗೆಯೇ ತೇಜೋರೂಪವಾದ ಅಂತಃಕರಣವು ಚಕ್ಷುರಾದೀನ್ದ್ರಿಯ ಗಳ ಮೂಲಕ ಘಟಾದಿ ವಿಷಯಗಳಲ್ಲಿ ಪ್ರಸರಿಸಿ ಆ ಘಟಾದ್ಯಾಕಾರಗಳಾಗಿ ಪರಿಣಮಿಸುತ್ತದೆ. ಅದಕ್ಕೆ ವೃತ್ತಿಯೆಂದು ಹೆಸರು. "ಇದಕ್ಕೆ ಹನ್ನೆರಡ ನೇಯ ಸೂತ್ರದ" ವಿಶೇಷಾರ್ಥವನ್ನು ನೋಡಿರಿ.

**ಅ॥ ಪ್ರಮಾಣ ವೃತ್ತಿಸ್ವರೂಪವನ್ನು ನಿರೂಪಿಸುತ್ತಾರೆ.**

೭. ಸೂ॥ ಪ್ರತ್ಯಕ್ಷಾನುಮಾನಾಗಮಾಃ ಪ್ರಮಾಣಾನಿ ।

ತಾ॥ ಪ್ರತ್ಯಕ್ಷ, ಅನುಮಾನ, ಆಗಮ (ಶಬ್ದ) ಎಂದು ಪ್ರಮಾಣ ಗಳು ಮೂರು ವಿಧಗಳು.

ವಿ॥ ೧. ಇತರ ಪ್ರಮಾಣಗಳ ಸಹಾಯವಿಲ್ಲದೆ ಮೊದಲು ತಿಳಿಯದೆಯಿದ್ದ ವಿಷ ಯಾಕಾರವಾಗಿ ಪರಿಣಮಿಸುವ ಚಿತ್ತವೃತ್ತಿ ಪ್ರತ್ಯಕ್ಷ ಪ್ರಮಾಣವಾಗುವುದು. ಅಂದರೆ ಇಂದ್ರಿಯಗಳ ಮೂಲಕ ಬಾಹ್ಯ ವಸ್ತುವುಗಳಲ್ಲಿ ಸಂಬಂಧಿಸುವುದ ರಿಂದಾಗುವ ವಿಶೇಷಗಳನ್ನು ನಿಶ್ಚಯಿಸುವುದೇ ಪ್ರತ್ಯಕ್ಷವು. ಇದು ಪ್ರಧಾನ ವಾದ ವೃತ್ತಿ.

೨. ಪ್ರತ್ಯಕ್ಷ ಮೂಲಕವಾಗಿ ಊಹಿಸುವುದಕ್ಕೆ ಕಾರಣವಾದ ವಸ್ತುವಿನ ಆಕಾರವಾಗಿ ಪರಿಣಮಿಸುವ ಚಿತ್ತವೃತ್ತಿಗೆ ಅನುಮಾನ ಪ್ರಮಾಣವೆಂದು ಹೆಸರು.

ಅಂದರೆ ಒಂದು ಗುರುತನ್ನು ಹಿಡಿದು ಅದಕ್ಕೆ ಸಂಬಂಧಿಸಿದ ವಸ್ತುವನ್ನು ಊಹಿಸುವುದೇ ಅನುಮಾನ. ಈ ಗುರುತು "ಲಿಂಗ" ವೆನ್ನಲ್ಪಡುವುದು. ಊಹಿಸಲ್ಪಡುವುದು "ಲಿಂಗಿ" ಯೆನ್ನಲ್ಪಡುವುದು. ಹೇಗಂದರೆ ಬೆಟ್ಟದ ಮೇಲ್ಗಡೆ ಹೊಗೆ ಕಾಣಲ್ಪಡುತ್ತೆ. ಆ ಹೊಗೆಯೇ ಲಿಂಗವೆನ್ನಲ್ಪಡುವುದು. ಊಹಿಸಲ್ಪಡುವ ಬೆಂಕಿಯೇ ಲಿಂಗಿಯೆನ್ನಲ್ಪಡುತ್ತದೆ.

ಯೋಗ್ಯವಾದ ವಾಕ್ಯದಿಂದಲೂ, ನಿಶ್ಚಯವನ್ನು ಹೇಳುವವನ ಮಾತಿನಿಂದಲೂ, ಶೃತಿ ಸ್ಮೃತ್ಯಾದಿ ಪ್ರಮಾಣಗಳಿಂದಲೂ, ತಿಳಿಯುವ ಚಿತ್ತವೃತ್ತಿ ಆಗಮ (ಶಬ್ದ) ಪ್ರಮಾಣವೆನ್ನಲ್ಪಡುವುದು. ಪ್ರಮಾಣವೆಂದರೆ ಬಾಧಿಸದ ಜ್ಞಾನವು. ಹೇಗೆಂದರೆ ಬೆಳ್ಳಿಯನ್ನು ನೋಡಿದ ಮೇಲೆ ಬೆಳ್ಳಿಯೇ ಎಂದು ತಿಳಿಯುವುದು ಪ್ರಮಾಣವು. ಇದು ಯಾವ ಕಾಲದಲ್ಲಿಯೂ ಬಾಧಿಸಲ್ಪಡುವುದಿಲ್ಲ. ಮುತ್ತಿನ ಚಿಪ್ಪನ್ನು ನೋಡಿ ಬೆಳ್ಳಿಯೆಂದು ತಿಳಿಯುವುದು ಅಪ್ರಮಾಣ ಇದು ಉತ್ತರ ಕಾಲದಲ್ಲಿ ಬಾಧಿಸಲ್ಪಡುತ್ತೆ. ಕೆಲವರು ಉಪಮಾನಾದಿ ಪ್ರಮಾಣಾದಿಗಳನ್ನು ಈ ಶಾಸ್ತ್ರದಲ್ಲಿ ಹೇಳಲಿಲ್ಲವೆಂದು ಭ್ರಮಿಸುತ್ತಾರೆ. ಪ್ರತ್ಯಕ್ಷಪ್ರಮಾಣಗಳು ಸೇರಿರುವುದಕ್ಕೋಸ್ಕರ ಬೇರೆಯಾಗಿ ಹೇಳಲಿಲ್ಲವೆಂದು ತಿಳಿಯಬೇಕು.

### ಅ॥ ವಿಪರ್ಯಯ ಲಕ್ಷಣವನ್ನು ಬೋಧಿಸುತ್ತಾರೆ

೮. ಸೂ॥ ವಿಪರ್ಯಯೋಮಿಥ್ಯಾಜ್ಞಾನಮತದ್ರೂಪಪ್ರತಿಷ್ಠಮ್।

ತಾ॥ ಇಲ್ಲದೆ ಇರುವ ವಸ್ತುವಿನ ರೂಪದಲ್ಲಿ ಆ ವಸ್ತುವಿದೆ ಎನ್ನುವುದು ಮಿಥ್ಯಾಜ್ಞಾನವು. ಇದಕ್ಕೆ ವಿಪರ್ಯಯವೃತ್ತಿಯೆನ್ನಲ್ಪಡುವುದು.

ವಿ॥ ಮುತ್ತಿನ ಚಿಪ್ಪನ್ನು ನೋಡಿ ಬೆಳ್ಳಿಯೆಂದು ತಿಳಿಯುವುದು ವಿಪರ್ಯಯವು. ಅಂದರೆ ತಾನು ತಿಳಿದುಕೊಂಡ ರೂಪದಲ್ಲಿ ತಾನು ತಿಳಿದ ಪ್ರಕಾರ ಇಲ್ಲದೆಯಿದ್ದರೂ ತಾನು ತಿಳಿದ ಹಾಗೆ ಇದೆಯೆಂದು ತಿಳಿಯುವ ಮಿಥ್ಯಾಜ್ಞಾನವೇ ವಿಪರ್ಯಯ ವೃತ್ತಿ. ಮತ್ತು ಹೀಗೆಯೇ ಸ್ತಂಭವನ್ನು ನೋಡಿ ಇದು ಸ್ತಂಭವೇ ಇಲ್ಲದಿದ್ದರೆ ಮನುಷ್ಯನೆ? ಎಂದು ಹುಟ್ಟುವ ಸಂಶಯಜ್ಞಾನವು ಕೂಡ ವಿಪರ್ಯಯವೆನ್ನಲ್ಪಡುವುದು.

### ಅ॥ ವಿಕಲ್ಪವೃತ್ತಿ ಲಕ್ಷಣವನ್ನು ಹೇಳುತ್ತಾರೆ

೯. ಸೂ॥ ಶಬ್ದ ಜ್ಞಾನಾನುಪಾತೀವಸ್ತು ಶೂನ್ಯೋ ವಿಕಲ್ಪಃ॥

ತಾ॥ ಶಬ್ದದಿಂದ ಹುಟ್ಟುವ ಅರ್ಥಜ್ಞಾನದಿಂದ ಅನುಸರಿಸಿದರೂ

ಕೂಡ, ವಸ್ತುವು ಮಾತ್ರ ಇಲ್ಲದೆ ಇರತಕ್ಕದ್ದು ವಿಕಲ್ಪವೃತ್ತಿಯೆನ್ನಲ್ಪಡುವುದು.

ವಿ॥ ವಿಷಯವನ್ನಪೇಕ್ಷಿಸದೆ ಶಬ್ದಜ್ಞಾನವನ್ನನುಸರಿಸಿ (ಅರ್ಥಜ್ಞಾನ) ಅದರಿಂದ ಹುಟ್ಟುವುದಕ್ಕೆ ವಿಕಲ್ಪವು. ಶಬ್ದಜ್ಞಾನಕ್ಕೆ ವಿಷಯವಾಗಿರತಕ್ಕ ವಸ್ತುವು ಸಂಪೂರ್ಣವಾಗಿಲ್ಲದೆಯಿದ್ದರೂ ಆ ವಸ್ತುವು ಸಂಪೂರ್ಣವಾಗಿದೆಯೆನ್ನುವ ಜ್ಞಾನವು ವಿಕಲ್ಪಜ್ಞಾನವು. ಹೇಗೆಂದರೆ ದೇವದತ್ತನ ವಸ್ತ್ರ, ರಾಹುವಿನ ಶಿರಸ್ಸು, ಪುರುಷನ ಚೈತನ್ಯ, ಎಂಬುವೇ ಮೊದಲಾದವು; ದೇವದತ್ತನ ವಸ್ತ್ರವೆನ್ನುವಾಗ ದೇವದತ್ತನು ಬೇರೆ, ವಸ್ತ್ರವು ಬೇರೆ ಎನ್ನುವ ಭೇದವನ್ನು ತಿಳಿಸುತ್ತದೆ. ರಾಹುವಿನ ಶಿರಸ್ಸು ಎನ್ನುವಾಗ ತನ್ನ ಆಕಾರವೆಲ್ಲವೂ ಶಿರಸ್ಸು ಮಾತ್ರವೇ ಆಗಿರುವ ರಾಹುವಿಗೆ ಬೇರೆ ಶರೀರವು ಉಂಟೆಂಬ ಜ್ಞಾನವು ಹುಟ್ಟುತ್ತದೆ. ಪುರುಷನ ಚೈತನ್ಯವು (ತಿಳುವಳಿಕೆ) ಅನ್ನುವಾಗ ಪುರುಷನು ಬೇರೆ, ತಿಳಿವಳಿಕೆ ಬೇರೆ ಅನ್ನುವ ಭೇದವು ತಿಳಿಸಲ್ಪಡುತ್ತೆ. ಇದಕ್ಕೆ ವಿಕಲ್ಪಜ್ಞಾನವೆಂದು ಹೆಸರು.

### ಅ॥ ನಿದ್ರಾವೃತ್ತಿ ಲಕ್ಷಣವನ್ನು ಹೇಳುತ್ತಾರೆ

## ೧೦. ಸೂ॥ ಅಭಾವ ಪ್ರತ್ಯಯಾ ಲಮ್ಬನಾವೃತ್ತಿರ್ನಿದ್ರಾ।

ತಾ॥ ಜಾಗ್ರತ್ಸ್ವಪ್ನಾವಸ್ಥೆಗಳು ಇಲ್ಲದೆಯಿರತಕ್ಕ ಜ್ಞಾನವನ್ನಾಶ್ರಯಿಸಿರುವುದಕ್ಕೆ ನಿದ್ರಾವೃತ್ತಿಯೆನ್ನಲ್ಪಡುವುದು.

ವಿ॥ ವಿಷಯಜ್ಞಾನವನ್ನವಲಂಬಿಸದೆ ಇರತಕ್ಕ ವೃತ್ತಿಯೇ ನಿದ್ರೆ. ಭಾವವೆಂದರೆ ವಿಷಯವು. ಪ್ರತ್ಯಯವೆಂದರೆ ಜ್ಞಾನವು. ವಿಷಯ ಜ್ಞಾನಗಳೆರಡೂ ಇಲ್ಲದೆ ಚಿತ್ತಕ್ಕೆ ಹುಟ್ಟುವ ವೃತ್ತಿಯೇ ನಿದ್ದೆ. ಅಭಾವವೆಂದರೆ ಜಾಗ್ರತ್ಸ್ವಪ್ನಗಳಿಲ್ಲದೆ ಹೋಗುವಿಕೆ. ಪ್ರತ್ಯಯವೆಂದರೆ ಕಾರಣವೆಂದೂ, ಆಲಂಬನವೆಂದರೆ ವಿಷಯವೆಂದೂ ಹೆಸರು.

ಜಾಗ್ರತ್ಸ್ವಪ್ನಗಳಿಲ್ಲದೆ ಹೋಗುವುದಕ್ಕೆ ಕಾರಣವಾದ ತಮೋಗುಣೋದ್ರೇಕದಿಂದ ಸಮಸ್ತ ವಿಷಯಾನುಭವಗಳನ್ನು ಬಿಟ್ಟಿರುವ ಸುಷುಪ್ತಿಕಾಲವೇ ನಿದ್ದೆಯೆನ್ನಲ್ಪಡುವುದು. ನಾನು ಸುಖವಾಗಿ ನಿದ್ದೆಹೋದೆನೆಂದು ನಿದ್ರಾವಸ್ಥೆಯನ್ನು ಸ್ಮರಿಸುತ್ತಾರೆ. ನಿದ್ದೆಹೋಗದೆ ಇರುವ ಪಕ್ಷದಲ್ಲಿ ಹಾಗೆ ಸ್ಮರಿಸುವದಕ್ಕೆ ಅವಕಾಶವಾಗಲಾರದು. ಆದ್ದರಿಂದ ನಿದ್ದೆಗೆ ವೃತ್ತಿತ್ವವು ಸಿದ್ಧಿಸುತ್ತದೆ. ಈ ನಿದ್ರಾವೃತ್ತಿಯನ್ನು ಯೋಗದಲ್ಲಿರದೆಯಿರುವ ಹಾಗೆ ಮಾಡಬೇಕು.

ಅ॥ ಸ್ಮೃತಿವೃತ್ತಿಯನ್ನು ವಿವರಿಸುತ್ತಾರೆ

೧೧. ಸೂ॥ ಅನುಭೂತ ವಿಷಯಾ ಸಂಪ್ರಮೋಕ್ಷ ಸ್ಮೃತಿಃ ॥

ತಾ॥ ಪ್ರಮಾಣವೃತ್ತಿಯಿಂದ ಅನುಭವಿಸಿದ ವಿಷಯಗಳು ಜ್ಞಾಪಕಕ್ಕೆ ಬರುವುದೇ ಸ್ಮೃತಿವೃತ್ತಿಯೆನ್ನಲ್ಪಡುವುದು

ವಿ॥ ಅನಾದಿಯಾಗಿ ಬಹಳ ಜನ್ಮಗಳಿಂದಲೂ ಮತ್ತು ಈ ಜನ್ಮದಲ್ಲಿಯೂ ಪ್ರತ್ಯಕ್ಷಪ್ರಮಾಣಗಳಿಂದ ಅನುಭವಿಸಿದ ವಿಷಯಗಳು ಚಿತ್ತದಲ್ಲಿ ವಾಸನಾ (ಸಂಸ್ಕಾರ) ರೂಪದಲ್ಲಿದ್ದು ಬುದ್ಧಿಗೆ ಎದುರಾಗಿ ಬರುವುದಕ್ಕೆ ಅಥವ ಬುದ್ಧಿಯಲ್ಲಿ ಹಿಡಿದಿರುವುದೇ ಸ್ಮೃತಿಯೆನ್ನಲ್ಪಡುತ್ತದೆ.

ಅಂದರೆ ನಾವು ಒಂದು ಪದಾರ್ಥವನ್ನು ನೋಡಿದ ಮೇಲೆ ಅದನ್ನು ನೋಡಿದ ಮೊದಲು ಮರೆತು ಹೋಗುವವರೆಗೂ ಆ ಪದಾರ್ಥವು ನಮ್ಮ ಚಿತ್ತದಲ್ಲಿರುತ್ತದೆ. ಆಮೇಲೆ ಆ ಪದಾರ್ಥವನ್ನು ನೆನೆದುಕೊಂಡರೆ ಅದು ಜ್ಞಪ್ತಿಗೆ ಬರುತ್ತದೆ. ಇದಕ್ಕೆ ಸ್ಮೃತಿವೃತ್ತಿಯೆಂದು ಹೆಸರು. ಮೇಲೆ ವಿವರಿಸಿದ ಪಂಚವೃತ್ತಿಗಳಲ್ಲಿ ಪ್ರಮಾಣ ವೃತ್ತಿ, ವಿಪರ್ಯಯ ವೃತ್ತಿ, ವಿಕಲ್ಪ ವೃತ್ತಿಯೆನ್ನುವ ಮೂರು ವೃತ್ತಿಗಳೂ ಜಾಗ್ರತಾವಸ್ಥೆಯನ್ನಲ್ಪಡುವುದು. ಈ ಮೂರು ವೃತ್ತಿಗಳಲ್ಲಿನ ವಿಷಯಗಳು ಅನುಭವ ಬಲದಿಂದ ಚಿತ್ತದಲ್ಲಿ ವಾಸನಾರೂಪಕವಾಗಿದ್ದು ಸ್ಮೃತಿರೂಪವಾಗಿ ಬುದ್ಧಿಗೆ ಗೋಚರವಾಗುವುದೇ ಸ್ವಪ್ನಾವಸ್ಥೆಯೆನ್ನಲ್ಪಡುವುದು.

ಈ ವೃತ್ತಿಗಳು ಮೂರೂ ಬುದ್ಧಿಗೆ ಗೋಚರವಾಗದೆ ಇರುವುದೇ ನಿದ್ರಾವಸ್ಥೆ (ಸುಷುಪ್ತಿ) ಯೆನ್ನಲ್ಪಡುವುದು.

ಪ್ರಮಾಣ, ವಿಕಲ್ಪ, ನಿದ್ದೆಯನ್ನು ಹಿಡಿದಿರುವುದು ಸ್ಮೃತಿ ಅಥವಾ ನೆನಪು ಎಂದು ತಿಳಿಯಬೇಕು. ಈ ನೆನಪು ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ದೆಗಳ ವಾಸನಾಜನ್ಯವಾಗಿ ಜಾಗ್ರತ್ಸ್ವಪ್ನ ಸುಷುಪ್ತಿಗಳೆಂಬ ಮೂರವಸ್ಥೆಗಳಲ್ಲಿರುತ್ತದೆ.

ಅ॥ ವೃತ್ತಿನಿರೋಧವನ್ನು ಹೇಳುತ್ತಾರೆ

೧೨. ಸೂ॥ ಅಭ್ಯಾಸ ವೈರಾಗ್ಯಾಭ್ಯಾಂ ತನ್ನಿರೋಧಃ ।

ತಾ॥ ಅಭ್ಯಾಸ ವೈರಾಗ್ಯಗಳಿಂದ ಇದುವರೆವಿಗೆ ಹೇಳಲ್ಪಟ್ಟ ಚಿತ್ತವೃತ್ತಿಗಳನ್ನು ನಿಗ್ರಹಿಸುವುದೇ ನಿರೋಧವೆನ್ನಲ್ಪಡುವುದು.

ವಿ|| ಅಭ್ಯಾಸ ವೈರಾಗ್ಯಗಳಿಂದ ಸುಖ ದುಃಖ ಮೋಹ ರೂಪಕವಾದ ಪ್ರಪಂಚಾನುಭವವನ್ನು ಮಾಡಿಸುವ ವೃತ್ತಿಗಳನ್ನು, ಅದೇ ವೃತ್ತಿಗಳಿಗೆ ಕಾರಣವಾದ ಚಿತ್ತದಲ್ಲಿ ಲಯಹೊಂದಿಸುವುದೇ ಚಿತ್ತವೃತ್ತಿ ನಿರೋಧಕವೆನ್ನಲ್ಪಡುವುದು. ಅಭ್ಯಾಸದಿಂದ ವೃತ್ತಿಗಳ ವಿಮುಖತೆಯು ಸ್ಥಿರಪಡುತ್ತದೆ.

ವೃತ್ತಿಯೆಂದರೆ, ಬುದ್ಧಿ, ಆಯಾ ಇಂದ್ರಿಯಗಳಿಂದ ಬಾಹ್ಯಕ್ಕೆ ಬರುವುದು. ಹೀಗೆ ಬಾಹ್ಯಕ್ಕೆ ಬರುವುದನ್ನು ನಿಲ್ಲಿಸಲ್ಪಟ್ಟರೆ ವೃತ್ತಿಗಳು ಅಂತರ್ಮುಖವಾಗಿ ತಮಗೆ ಕಾರಣವಾಗುತ್ತದೆ. ಚಿತ್ತದಲ್ಲಿ ಶಕ್ತಿ ಸೂಕ್ಷ್ಮರೂಪವಾಗಿರುತ್ತದೆ. ವಿಷಯಗಳಲ್ಲಿರುವ ದೋಷಗಳನ್ನು ನೋಡುವುದರಿಂದ ಹುಟ್ಟುವ ವೈರಾಗ್ಯದಿಂದ ವಿಷಯಗಳಲ್ಲಿ ಸಿಕ್ಕದೆ ವಿಮುಖತೆಯನ್ನು ಹೊಂದಿಸುತ್ತದೆ. ಅಭ್ಯಾಸದಿಂದ ಚಿತ್ತವನ್ನು ಸ್ಥಿರವಾಗಿರುವ ಹಾಗೆ ಧೃಢೀಕರಿಸುತ್ತದೆ. ಆದಕಾರಣ ಚಿತ್ತವೃತ್ತಿ ನಿರೋಧವು ಅಭ್ಯಾಸ ವೈರಾಗ್ಯಗಳಿಂದಲೇ ಆಗುತ್ತದೆಂದು ತಿಳಿಯಬೇಕು.

**ಅ|| ಅಭ್ಯಾಸ ಸ್ವರೂಪವನ್ನು ತಿಳಿಸುತ್ತಾರೆ**

೧೩. ಸೂ|| ತತ್ರಸ್ಥಿತಾ ಯತ್ನೋಽಭ್ಯಾಸಃ ||

ತಾ|| ಚಿತ್ತವೃತ್ತಿಗಳನ್ನು ಲಯಿಸುವುದಕ್ಕೂ, ಚಿತ್ತೈಕಾಗ್ರತೆಯನ್ನು ಮಾಡಿಸುವುದಕ್ಕೂ, ಪ್ರಯತ್ನಪಡುವ ಹಾಗೆ ಮಾಡುವುದಕ್ಕೆ ಅಭ್ಯಾಸವೆಂದು ಹೆಸರು.

ವಿ|| ಯಾವ ವೃತ್ತಿಗಳೂ ಇಲ್ಲದೆಯಿರುವ ಚಿತ್ತವು ಸ್ಥಿರವಾಗಿರುವುದಕ್ಕೆ ಸ್ಥಿತಿ ಎಂದು ಹೆಸರು. ಚಿತ್ತವು ಸ್ಥಿರವಾಗಿರುವುದಕ್ಕೆ ಯತ್ನಮಾಡುವುದೇ ಅಭ್ಯಾಸ. ಅಂದರೆ ಚಿತ್ತವೃತ್ತಿಗಳು ಲಯವಾಗಿ ಚಿತ್ತಸ್ವರೂಪ ನಿಷ್ಠೆಯಾದ ಪರಿಣಾಮ ಅಥವ ಏಕಾಗ್ರತೆ ಹುಟ್ಟುವುದರಲ್ಲಿ ಉತ್ಸಾಹದಿಂದ ಪುನಃಪುನಃ ಪ್ರಯತ್ನಪಡುವುದಕ್ಕೆ ಅಭ್ಯಾಸವೆಂದು ಭಾವವು.

**ಅ|| ಅಭ್ಯಾಸದ ದಾರ್ಢ್ಯವನ್ನು ನಿರೂಪಿಸುತ್ತಾರೆ**

೧೪. ಸೂ|| ಸತುದೀರ್ಘಕಾಲ ವೈರನ್ತರ್ಯ ಸತ್ಕಾರ ಸೇವಿತೋ ದೃಢಭೂಮಿಃ |

ತಾ|| ಆ ಯಭ್ಯಾಸವು ಬಹುಕಾಲದ ವರೆಗೂ ಬಿಡದ ಹಾಗೆ ಆದರಾತಿಶಯದಿಂದ ಸೇವಿಸುತ್ತಾ ಇದ್ದರೆ ಸ್ಥಿರವಾದ ದಶೆ (ಅವಸ್ಥೆ) ಹುಟ್ಟುತ್ತದೆ.

ವಿ॥ ಉತ್ಸಾಹದಿಂದ ಬಹಳ ಕಾಲದವರೆಗೂ ಬಿಡದೆ ಸತ್ಕಾರಗಳನ್ನು, ಬ್ರಹ್ಮಚರ್ಯೆ ಮೊದಲಾದ ತಪಸ್ಸುಗಳನ್ನು ಮಾಡುವುದರಿಂದ ಅಭ್ಯಾಸವು ಸ್ಥಿರವಾಗುತ್ತದೆ. ಸ್ಥಿರವೆಂದರೆ, ವಿಷಯಗಳಿಂದ ಬರುವ ತೊಂದರೆಯನ್ನು ಜಾಗ್ರತೆಯಾಗಿ ಹೊಂದದೆಯಿರುವುದು. ಇದನ್ನು ದಾರ್ಢ್ಯವೆಂದು ಹೇಳುತ್ತಾರೆ.

**ಅ॥ ವೈರಾಗ್ಯ ಸ್ವರೂಪವನ್ನು ವಿವರಿಸುತ್ತಾರೆ.**

೧೫. ಸೂ॥ ದೃಷ್ಟಾನು ಶ್ರವಿಕವಿಷಯ ವಿತೃಷ್ಣಸ್ಯ ವಶೀಕಾರ ಸಂಜ್ಞಾ ವೈರಾಗ್ಯಮ್ ।

**ತಾ॥** ಇಹದಲ್ಲಿಯೂ, ಪರದಲ್ಲಿಯೂ ಅನುಭವಿಸುವ ವಿಷಯಗಳಲ್ಲಿ ಆಶೆಯಿಲ್ಲದವನಿಗೆ ವಿಷಯಗಳು ತನ್ನ ವಶವಾಗಿದೆಯೆಂದು ತಿಳಿಯುವುದೇ ವೈರಾಗ್ಯ.

ವಿ॥ ಸ್ರಕ್ಚಂದನ ವನಿತಾ ಭೋಗಾದಿ ವಿಷಯಗಳನ್ನು ಇಹದಲ್ಲಿಯೂ, ವೇದದಿಂದ ತಿಳಿಯಲ್ಪಟ್ಟ ರಂಭಾದಿ ಭೋಗ ವಿಷಯಗಳನ್ನು ಪರ (ಸ್ವರ್ಗ) ದಲ್ಲಿಯೂ, ಅಭಿಲಾಷೆಮಾಡದೆಯಿರುವಿಕೆ ವೈರಾಗ್ಯ.

**ದೃಷ್ಟ ವಿಷಯಗಳೆಂದರೆ**—ಸ್ತ್ರೀ ಸಂಭೋಗವು, ಅನ್ನಪಾನಾದಿಗಳು, ಐಶ್ವರ್ಯ, ಮೊದಲಾದುವು ಐಹಿಕ ಸಂಬಂಧವಾದದ್ದು.

**ಅನುಶ್ರವ ವೆಂದರೆ**—ವೇದಗಳಿಂದ ತಿಳಿಯಲ್ಪಡುವ ಸ್ವರ್ಗಾದಿ ಲೋಕಾಂತರಗಳಲ್ಲಿ ಅನುಭವಿಸಲ್ಪಟ್ಟ ಆಮುಷ್ಮಿಕ ಸಂಬಂಧಗಳು. ಇವು ದೀರ್ಘಕಾಲ ಅನುಭವಿಸಲ್ಪಡತಕ್ಕದ್ದಲ್ಲ. ಆದುದರಿಂದ ಇವುಗಳಲ್ಲಿ ಆಶೆಯನ್ನು ಬಿಡಬೇಕು. (ಅಂದರೆ ಇವುಗಳಿಗೆ ವಶನಾಗದೆ ಇರಬೇಕು) ಹೀಗೆ ಬಿಟ್ಟವನಿಗೆ ವೈರಾಗ್ಯವು ಹುಟ್ಟುತ್ತದೆ. ಅಂದರೆ, ಐಹಿಕಾಮುಷ್ಮಿಕ ಭೋಗಗಳು ತುಚ್ಛವಾದವುಗಳೆಂದು, ಕೆಲವುಕಾಲವೇ ಇರತಕ್ಕದ್ದಾದ್ದರಿಂದ ಅಶಾಶ್ವಿತವಾದವುಗಳೆಂದು ತಿಳಿದು ಬಿಟ್ಟವನೇ ವಿರಾಗಿಯೆಂದು ಭಾವವು.

**ಅ॥ ವೈರಾಗ್ಯದ ಸ್ವರೂಪದ ವಿಶೇಷವನ್ನು ಹೇಳುತ್ತಾರೆ.**

೧೬. ಸೂ॥ ತತ್ಪರಂ ಪುರುಷ ಖ್ಯಾತೇ ರ್ಗುಣವೈ ತೃಷ್ಣ್ಯಮ್ ॥

ತಾ॥ ತ್ರಿಗುಣಗಳಲ್ಲಿ ಆಶೆ ಇಲ್ಲದಿರುವಿಕೆಯೇ ಗುಣ ವೈರಾಗ್ಯ. ಇದು ಮೇಲೆ ಹೇಳಿದ ವಿಷಯ ವೈರಾಗ್ಯಗಳಿಗಿಂತ, ಉತ್ಕೃಷ್ಟವಾದದ್ದು.

ವಿ|| ಚಿನ್ಮಾತ್ರನಾದ ಪುರುಷನಿಗೆ (ಅಂದರೆ ತನ್ನ) ಆತ್ಮಸ್ವರೂಪವನ್ನು ತಿಳಿದವನಿಗೆ ಇಹಪರಸಂಬಂಧದಿಂದ ಹುಟ್ಟುವ ವಿಷಯವೈರಾಗ್ಯಕ್ಕಿಂತಲೂ, ಈ ವಿಷಯಗಳಿಗೆ ಕಾರಣವಾಗಿರುವ ಸತ್ತ್ವಾದಿ ಗುಣಗಳಿಂದ ಹುಟ್ಟುವ ಗುಣವೈರಾಗ್ಯವು ಅಸಂಪ್ರಜ್ಞಾತಸಮಾಧಿಗೆ ಅತಿ ಸಮೀಪವಾಗಿದ್ದು ಅನುಕೂಲವನ್ನು ಕೊಡುವಂಥಾದ್ದರಿಂದ ಶ್ರೇಷ್ಠವೆಂದು ಹೇಳಲ್ಪಟ್ಟಿತು.

ಅಂದರೆ ಐಹಿಕಾಮುಷ್ಮಿಕಗಳಲ್ಲಿ ದೋಷಗಳನ್ನು ತಿಳಿದವನು ತನ್ನ ಸ್ವರೂಪವನ್ನು ನೋಡಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾನೆ. ಹೀಗೆ ತ್ರಿಗುಣಗಳಿಗೂ, ತನ್ನ ಸ್ವರೂಪಕ್ಕೂ ಇರುವ ಭೇದವನ್ನು ತಿಳಿಯುವುದರಿಂದ ವೈರಾಗ್ಯವು ಹುಟ್ಟುತ್ತದೆ. ಇದೇ ಗುಣ ವೈರಾಗ್ಯ ಇದರಿಂದ ಮುಕ್ತಿಯುಂಟಾಗುತ್ತದೆ.

**ಅ|| ಹೀಗೆ ಯೋಗಸ್ವರೂಪವನ್ನು ನಿರೂಪಿಸಿ ಯೋಗಭೇದವನ್ನು ವಿವರಿಸುವುದಕ್ಕೋಸ್ಕರ ಪ್ರಥಮದಲ್ಲಿ ಸಂಪ್ರಜ್ಞಾತಸಮಾಧಿಯನ್ನು ಹೇಳುತ್ತಾರೆ.**

೧೭. ಸೂ|| ವಿತರ್ಕ ವಿಚಾರಾನನ್ದಾಸ್ಮಿತಾ
ರೂಪಾನುಗಮಾತ್ಸಂ ಪ್ರಜ್ಞಾತಃ ||

**ತಾ|| ವಿತರ್ಕವೆಂದೂ, ವಿಚಾರವೆಂದೂ, ಆನಂದವೆಂದೂ, ಅಸ್ಮಿತವೆಂದೂ, ಹೇಳಲ್ಪಡುವ ಸಮಾಧಿಗಳಲ್ಲಿ ಕೂಡಿದ ಸಮಾಧಿಗೆ, "ಸಂಪ್ರಜ್ಞಾತ ಸಮಾಧಿ"** ಯೆಂದು ಹೆಸರು.

ವಿ|| ಸವಿತರ್ಕ, ಸವಿಚಾರ, ಸಾನಂದ, ಸಾಸ್ಮಿತವೆಂದೂ ಇದೆ. ಸಂಪ್ರಜ್ಞಾತವೆಂದರೆ:—ಯಾವುದರಿಂದ ಸಂಶಯ ವಿಪರ್ಯಗಳಿಲ್ಲದೆ ಧ್ಯಾನಿಸುವ ವಸ್ತುವಿನ ವಿಶಿಷ್ಟಸ್ವರೂಪವು ವಿಶೇಷವಾಗಿ ತಿಳಿಯಲ್ಪಡುವುದೋ, ಅದಕ್ಕೆ ಸಂಪ್ರಜ್ಞಾತವೆಂದು ಹೆಸರು. ಸಮಾಧಿ ಎಂದರೆ,—ಭಾವನಾ ವಿಶೇಷವು, ಭಾವನಾ ವಿಶೇಷವೆಂದರೆ,—ಇತರ ವಿಷಯಗಳನ್ನು ಪರಿಹರಿಸಿ ಭಾವಿಸತಕ್ಕ ವಸ್ತುವನ್ನು ಮಾತ್ರವೇ ಮತ್ತು ಚಿತ್ತದಲ್ಲಿ ನಿಲ್ಲಿಸುವಿಕೆ. (ಅಂದರೆ ಭಾವಿಸತಕ್ಕ ವಸ್ತುವಿಗೆ ವ್ಯತಿರಿಕ್ತವಾಗಿ ಚಿತ್ತದಲ್ಲಿ ಹುಟ್ಟುವ ವೃತ್ತಿಗಳನ್ನು ನಿಗ್ರಹಿಸುವಿಕೆ) ಆ ಭಾವನೆಗೆ ಗುರಿಯಾದ ವಸ್ತುವು ಭಾವ್ಯವೆನ್ನಲ್ಪಡುವುದು. (ಅಂದರೆ ಭಾವಿಸಲ್ಪಡುವುದೆ ಭಾವ್ಯವು) ಈ ಭಾವ್ಯವು ಎರಡು ವಿಧಗಳು. ೧ನೇದು ಈಶ್ವರ ೨ನೇದು ಇಪ್ಪತ್ತೈದು ತತ್ತ್ವಗಳು. ಈ ತತ್ತ್ವಗಳೆರಡುವಿಧ. ೧ ಅಜಡ ತತ್ತ್ವಗಳು, ೨ ಜಡ ತತ್ತ್ವಗಳು, ೧ನೇ ಅಜಡ ತತ್ತ್ವಗಳು

ಚಿನ್ಮಾತ್ರನಾದ ಪುರುಷನು, ೨ನೇ ಜಡ ತತ್ತ್ವಗಳು ಸೂಕ್ಷ್ಮಕಾರಣ ಭೇದಗಳಿಂದ ಇಪ್ಪತ್ತುನಾಲ್ಕು ವಿಧಗಳು ಯಾವುವೆಂದರೆ—ಪೃಥಿವಿ, ಅಪ್ಪು, ತೇಜಸ್ಸು, ವಾಯುವು, ಆಕಾಶಗಳೆಂಬ ಪಂಚಭೂತಗಳು, ತ್ವಕ್ಕು, ಚಕ್ಷು ಶೋತ್ರ, ಜಿಹ್ವ, ಘ್ರಾಣಗಳೆಂಬ ಜ್ಞಾನೇಂದ್ರಿಯಗಳು,—ವಾಕ್ಕು, ಪಾಣಿ, ಪಾದ, ಪಾಯುವು, ಉಪಸ್ಥಗಳೆಂಬ ಪಂಚಕರ್ಮೇನ್ದ್ರಿಯಗಳು. ಈ ಹದಿನೈದು ಸ್ಥೂಲಭೂತಗಳು. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಪಂಚತನ್ಮಾತ್ರಗಳು, ಮನಸ್ಸು, ಬುದ್ಧಿ, ಅಹಂಕಾರ, ಪ್ರಕೃತಿಗಳೆಂಬ ಅಂತಃಕರಣ ಚತುಷ್ಟಯವು ಎಂಬ ಈ ಒಂಭತ್ತು ಸೂಕ್ಷ್ಮವಿಷಯಗಳು. ಈ ೨೪ ಜಡತತ್ತ್ವಗಳು.

ಸವಿತರ್ಕವೆಂದರೆ—ಸ್ಥೂಲಭೂತಗಳನ್ನು ಲಕ್ಷ್ಯವಾಗಿಟ್ಟುಕೊಂಡು, ಇವುಗಳ ಶಬ್ದಾರ್ಥಜ್ಞಾನ ಬೋಧನ ಭೇದದಿಂದ ಇವುಗಳಲ್ಲಿ ಯಾವುದರಿಂದ ಯಾವುದು ಹುಟ್ಟಿದೆ ಯೆಂಬುದನ್ನು ಕಾರ್ಯಕಾರಣ ಭಾವಗಳನ್ನೂ ವಿಮರ್ಶಿಸುವುದಕ್ಕೆ ಸವಿತರ್ಕ ಸಮಾಧಿಯೆಂದು ಹೆಸರು.

ಅಂದರೆ ಸ್ಥೂಲವಾದ ಭೂತಗಳನ್ನು ವಿಷಯವಾಗಿ ಮಾಡಿಕೊಂಡು, ಇದು ಮುಂದೆ, ಇಂದು ಹಿಂದೆ ಯೆಂಬ ಜ್ಞಾನದಿಂದಲೂ, ಇದಕ್ಕೆ ಬೇರೆ ಯೆಂಬ ಶಬ್ದಾರ್ಥ ಜ್ಞಾನದಿಂದಲೂ, ಮಾಡುವ ಭಾವನೆಯೇ ಸವಿತರ್ಕ. (ಮೇಲೆ ಹೇಳಲ್ಪಟ್ಟ ಜ್ಞಾನವೆಷ್ಟರವರೆಗೂ ಇಲ್ಲದೆಯಿರುವುದೋ ಅದುವರೆಗೂ ನಿರ್ವಿತರ್ಕವೆಂದು ತಿಳಿಯಬೇಕು) ಪ್ರಥಮದಲ್ಲಿ ಗುರಿಹೊಡೆಯುವುದಕ್ಕೆ ಅಭ್ಯಾಸಮಾಡುವನು ದೊಡ್ಡದಾಗಿ ಕಾಣುಬರುವ ಗುರಿಯನ್ನು ಹೊಡೆಯುವುದಕ್ಕೆ ಕಲಿತುಕೊಂಡು ನಂತರ ಸೂಕ್ಷ್ಮವಾದ ಗುರಿಯನ್ನು ಹೊಡೆಯುವುದಕ್ಕೆ ಯಾವರೀತಿ ಕಲಿಯುತ್ತಾನೆ ಅದೇರೀತಿಯಾಗಿ ಯೋಗವನ್ನು ಅಭ್ಯಾಸಮಾಡುವರು ಪ್ರಥಮದಲ್ಲಿ ಸ್ಥೂಲಾಕಾರವನ್ನು (ವಿಷ್ಣು, ಶಿವ, ಬ್ರಹ್ಮ ಮೊದಲಾದ ಆಕಾರಗಳನ್ನು) ಭಾವನೆ ಮಾಡಿಕೊಂಡು ಆಮೇಲೆ ಸೂಕ್ಷ್ಮಾಕಾರವಾದ ವಸ್ತುವನ್ನು ಕುರಿತು. ಭಾವನೆ ಮಾಡುತ್ತಾರೆ.

**ಸವಿಚಾರವೆಂದರೆ**—ಪಂಚತನ್ಮಾತ್ರಗಳೇ ಮೊದಲಾದ ಸೂಕ್ಷ್ಮ ವಿಷಯಗಳನ್ನು ಗುರಿಮಾಡಿಕೊಂಡು ಇವು ಯಾವಕಾಲದಲ್ಲಿ, ಯಾವ ಸ್ಥಳದಲ್ಲಿ ಯಾವಸ್ವರೂಪವಾದ ಧರ್ಮವುಳ್ಳದ್ದಾಗಿದೆಯೆಂಬ ಏರ್ಪಾಟಿನಿಂದ ಭಾವಿಸಿರುವುದೇ ಸವಿಚಾರ ಸಮಾಧಿ ಎನ್ನಲ್ಪಡುವುದು. (ಮೇಲೆ ಹೇಳಿದ ಹಾಗೆ ಭಾವಿಸದೇಯಿರುವುದಕ್ಕೆ ನಿರ್ವಿಚಾರವೆಂದು ಹೆಸರು.)

**ಸಾನಂದವೆಂದರೆ**—ಚಿತ್ತದಲ್ಲಿ ರಜಸ್ತಮೋಗುಣಗಳು ನಿಶ್ಶೇಷವಾಗಿ ನಶಿಸಿಹೋಗದೆ ಲೇಶಮಾತ್ರ ಮಿಕ್ಕಿರುವಕಾಲದಲ್ಲಿ ಆ ಚಿತ್ತದಲ್ಲಿರುವ

ಸತ್ತ್ವಗುಣವನ್ನು (ಅಂತಃಕರಣಸತ್ತ್ವವನ್ನು, ಭಾವಿಸುತ್ತಿರುವುದೇ ಸಾನಂದ ಸಮಾಧಿಯೆನ್ನಲ್ಪಡುವುದು. (ಸತ್ತ್ವವು ಸುಖಪ್ರಕಾಶರೂಪವಾದ್ದರಿಂದ ಸಾನಂದವೆನ್ನಲ್ಪಟ್ಟಿತು. ಈ ಸಾನಂದ ಸಮಾಧಿಯಲ್ಲಿ ರಜಸ್ತಮೋಗುಣಗಳ ಶೇಷವು ನಾಶಹೊಂದಿದಾಗ, ತಾನು ಭಾವಿಸುವುದರಲ್ಲಿ ಸತ್ತ್ವಗುಣ ಅಭಿವೃದ್ಧಿಹೊಂದುತ್ತಾ ಇರುತ್ತಾದ್ದರಿಂದ ಆನಂದವು ಹುಟ್ಟುತ್ತದೆ. ಮತ್ತು (ಇಂದ್ರಿಯಗಳೆಂಬ ಸ್ಥೂಲವಿಷಯಗಳನ್ನು ಸೇರಿಸುವುದು ಸಾನಂದವು.) ಈ ಸಾನಂದ ಸಮಾಧಿಯನ್ನು ಚೆನ್ನಾಗಿ ಅಭ್ಯಾಸಮಾಡಿ ಪ್ರಧಾನವು, ಪುರುಷನು ಎಂಬ ತತ್ತ್ವಗಳ ತಿಳಿವಳಿಕೆ ಲೇಶಮಾತ್ರವೂ ಇಲ್ಲದೆ ಇರುವವರು ವಿದೇಹಿಗಳೆನ್ನಲ್ಪಡುತ್ತಾರೆ.

**ಸಾಸ್ಮಿತವೆಂದರೆ**— ರಜಸ್ತಮೋಗುಣಗಳು ಸಂಬಂಧಿಸದೆಯಿರತಕ್ಕ ಚಿತ್ತದಲ್ಲಿ ಶುದ್ಧಸತ್ತ್ವವನ್ನು ಮಾತ್ರ ಭಾವಿಸುವುದರಿಂದಲೂ, ಸತ್ತ್ವಗುಣವು ಕ್ರಮಕ್ರಮವಾಗಿ ನಾಶಹೊಂದುವುದರಿಂದ ಚೈತನ್ಯ ಶಕ್ತಿ ಮಾತ್ರವೆ ಮಿಕ್ಕಿರಿವುದು. ಆದ್ದರಿಂದ ಸಾಸ್ಮಿತ ಸಮಾಧಿಯೆನ್ನಲ್ಪಡುತ್ತದೆ.

**ಅಸ್ಮಿತವೆಂದರೆ**—ಬಹಿರ್ಮುಖದಲ್ಲಿ ಅಜ್ಞಾನದಿಂದ ಹುಟ್ಟುವ ಕ್ಲೇಶರೂಪವಾದ ಅಸ್ಮಿತವೆಂದು ಗ್ರಹಿಸದೆ, ಅಂತರ್ಮುಖದಲ್ಲಿ ಹುಟ್ಟುವ ಅಕ್ಲೇಶ (ಆನಂದ) ರೂಪಕವಾದ ಅಸ್ಮಿತವೆಂದು ಗ್ರಹಿಸಬೇಕು. ಅಸ್ಮಿತದಿಂದ ಇಂದ್ರಿಯಗಳು ಹುಟ್ಟುತ್ತಾದ್ದರಿಂದ ಇಂದ್ರಿಯಗಳಿಗೆ ಅಸ್ಮಿತವೇ ಸೂಕ್ಷ್ಮರೂಪವು.

ಮತ್ತು ಆತ್ಮನ ಕೂಡ ಬುದ್ಧಿಗೆ ಐಕ್ಯವನ್ನು ತಿಳಿಯಪಡಿಸುವ ಜ್ಞಾನವೇ ಅಸ್ಮಿತವೆನ್ನಲ್ಪಡುವುದು. ಇದರಲ್ಲಿ ಗ್ರಹೀತನಾದ ಆತ್ಮನು ಸೇರಿರುವುದರಿಂದ ಇದನ್ನು ಗ್ರಹೀತೃವಿಷಯವೆಂದು ಗ್ರಹಿಸಬೇಕು. ಅಹಂಕಾರಕ್ಕೂ ಅಸ್ಮಿತಕ್ಕೂ ಭೇದವೇನೆಂದರೆ, ಅಂತಃಕರಣವು ನಾನೆಂಬ ಜ್ಞಾನದಲ್ಲಿಯೇ ವಿಷಯಗಳನ್ನು ಗ್ರಹಿಸುವುದಕ್ಕೆ ಅಹಂಕಾರವೆಂದೂ, ಅಂತಃಕಣರವು ಅಂತರ್ಮುಖವಾಗಿದ್ದಲ್ಲಿ ಸತ್ತು (ಸ್ಥಿತಿ) ಮಾತ್ರ ತಿಳಿಯುವುದಕ್ಕೆ ಅಸ್ಮಿತವೆಂದು ಹೆಸರು.

ಈ ಸಾಸ್ಮಿತ ಸಮಾಧಿಯಿಂದ ಹುಟ್ಟುವ ಸಂತೋಷದಲ್ಲಿ ತೃಪ್ತಿಹೊಂದಿ ಪರಮಾತ್ಮನನ್ನು ನೋಡದೆಯಿರುವವರ ನೆನಪು ಅದಕ್ಕೆ ಕಾರಣವಾದ ಪ್ರಕೃತಿಯಲ್ಲಿ ಲಯಹೊಂದುವುದು. ಆದ್ದರಿಂದ ಅವರು ಪ್ರಕೃತಿಲಯರೆನ್ನಲ್ಪಡುವರು.

ಇದರಲ್ಲಿ ಸವಿತರ್ಕ,ಸವಿಚಾರಗಳೆಂಬ ಸಮಾಧಿಗಳಿಗೆ, ಗ್ರಾಹ್ಯಸಮಾಪತ್ತಿಯೆಂದೂ, ಸಾನಂದವು ಗ್ರಹಣ ಸಮಾಪತ್ತಿಯೆಂದೂ, ಸಾಸ್ಮಿತವು ಗ್ರಹೀತೃ ಸಮಾಪತ್ತಿಯೆಂದೂ ಹೇಳಲ್ಪಡುತ್ತವೆ.

ಈ ನಾಲ್ಕು ವಿಧಗಳ ಸಮಾಧಿಗಳಲ್ಲಿ, ಸವಿತರ್ಕವನ್ನು ತ್ಯಜಿಸಿದರೆ ಸವಿಚಾರವು, ಸವಿಚಾರವನ್ನು ಬಿಟ್ಟರೆ, ಸಾನಂದವು, ಸಾನಂದವನ್ನು ಬಿಟ್ಟರೆ ಸಾಸ್ಮಿತಹುಟುತ್ತದೆ. ಈ ನಾಲ್ಕು ಸಮಾಧಿಗಳಿಗೆ ಸಾಲಂಬನಾ ಸಮಾಧಿ ಎಂದೂ ಸಂಪ್ರಜ್ಞಾತ ಸಮಾಧಿಯೆಂದೂ ಹೆಸರುಗಳು. ಮತ್ತು ಸವಿತರ್ಕ, ಸವಿಚಾರಗಳೆರಡಕ್ಕೂ ಸಬೀಜ ಸಮಾಧಿಯೆಂದು ಹೆಸರು. ಸಬೀಜ ಸಮಾಧಿ ಯೆಂದರೆ ಚಿತ್ತವು ಅನ್ಯಪದಾರ್ಥಗಳನ್ನಾಶ್ರಯಿಸಿಕೊಂಡಿರುವಿಕೆ. ಇದರ ವಿವರಣೆಯನ್ನು ೪೨-೪೩-೪೪-ನೇ ಸೂತ್ರಗಳಲ್ಲಿ ಹೇಳಲ್ಪಡುತ್ತದೆ.

**ಅ|| ಅಸಂಪ್ರಜ್ಞಾತ ಸಮಾಧಿಯ ಲಕ್ಷಣವು ಹೇಳಲ್ಪಡುತ್ತೆ.**

೧೮. ಸೂ|| ವಿರಾಮ ಪ್ರತ್ಯಯಾಭ್ಯಾಸ
ಪೂರ್ವ ಸಂಸ್ಕಾರ ಶೇಷೋಽನ್ಯಃ ||

ತಾ|| ವಿತರ್ಕ ಮೊದಲು ಅಸ್ಮಿತಾಂತದವರೆಗೂ ಇರುವ ಸಂಪ್ರಜ್ಞಾತ ಸಮಾಧಿಗಳು ಇಲ್ಲದೆಹೋಗುವಿಕೆಯು, ಚಿತ್ತದಲ್ಲಿ ಯಾವ ವೃತ್ತಿಗಳು ಹುಟ್ಟಿದರೂ ಅವುಗಳನ್ನು ಬರಗೊಳಿಸದೆ ನಿರಾಕರಿಸುವಿಕೆಯು, ನಿರ್ಮಲವಾದ ಚಿತ್ಪ್ರಕಾಶಮಾರ್ಗದಿಂದ ಚಿನ್ಮಾತ್ರನಾದ ಪುರುಷನ ಸ್ವರೂಪ ವಾಗಿರುವಿಕೆಗೂ ಅಸಂಪ್ರಜ್ಞಾತ ಸಮಾಧಿಯೆಂದು ಹೆಸರು.

ವಿ|| ಈ ಸಮಾಧಿಯಲ್ಲಿ ತಿಳಿಯತಕ್ಕ ಪದಾರ್ಥಗಳಿಲ್ಲವಾದ್ದರಿಂದ ಅಸಂಪ್ರಜ್ಞಾತ ಸಮಾಧಿಯೆಂದು ಹೆಸರು. ಇದನ್ನೇ ನಿರ್ಬೀಜಸಮಾಧಿಯೆಂದೂ ಹೇಳುತ್ತಾರೆ. ಅಂದರೆ ಚಿತ್ತದಲ್ಲಿ ವೃತ್ತಿಗಳು ಹುಟ್ಟುವಾಗ ಅವುಗಳನ್ನು ನಿಗ್ರಹಿಸುವುದಕ್ಕೆ ಪ್ರಯತ್ನಮಾಡಬೇಕು. ಈ ಅಸಂಪ್ರಜ್ಞಾತ ಸಮಾಧಿ ಯಲ್ಲಿ ವಿಷಯವೇ ಇರುವುದಿಲ್ಲ. ಚಿತ್ತಕ್ಕೆ ವ್ಯುತ್ಥಾನ, ಸಮಾಧಿ ಪ್ರಾರಂಭ, ಏಕಾಗ್ರತೆ, ನಿರೋಧಗಳೆಂದು ನಾಲ್ಕು ಪರಿಣಾಮಗಳಿವೆ.

ಎರಡನೆಯ ಸೂತ್ರದಲ್ಲಿ ವಿವರಿಸಿದಹಾಗೆ ಕ್ಷಿಪ್ತ ಮೂಢಗಳೆರಡು ವ್ಯುತ್ಥಾನ. ವಿಕ್ಷಿಪ್ತ ಭೂಮಿಯಲ್ಲಿ ಸತ್ತ್ವಗುಣವು ಅತಿಶಯವಾಗಿರುವುದ ರಿಂದ ಅದಕ್ಕೆ ಸಮಾಧಿಪ್ರಾರಂಭವೆನ್ನಲ್ಪಟ್ಟಿತು. ನಾಲ್ಕನೆಯ ಭೂಮಿ ಏಕಾಗ್ರತೆ. ನಿರುದ್ಧಭೂಮಿ ನಿರೋಧವು, ಇದು ಒಂದರಿಂದ ಮತ್ತೊಂದು ದೂರೀಕರಿಸಲ್ಪಡುತ್ತೆ. ಹೇಗೆಂದರೆ ವ್ಯುತ್ಥಾನದಿಂದ ಹುಟ್ಟಿದ ಸಂಸ್ಕಾರ ಗಳನ್ನು, ಸಮಾಧಿ ಪ್ರಾರಂಭದಿಂದ ಹುಟ್ಟಿದ ಸಂಸ್ಕಾರಗಳು, ಹೋಗ ಲಾಡಿಸುತ್ತದೆ. ಸಮಾಧಿ ಪ್ರಾರಂಭದಿಂದ ಹುಟ್ಟಿದ ಸಂಸ್ಕಾರಗಳನ್ನು ಏಕಾಗ್ರತೆಯಿಂದ ಹುಟ್ಟಿದ ಸಂಸ್ಕಾರಗಳು ಹೋಗಲಾಡಿಸುತ್ತದೆ. ಏಕಾ ಗ್ರತೆಯಿಂದ ಹುಟ್ಟಿದ ಸಂಸ್ಕಾರಗಳನ್ನು ನಿರೋಧದಿಂದ ಹುಟ್ಟಿದ ಸಂಸ್ಕಾರ

ಗಳು ನಿಗ್ರಹಿಸುತ್ತವೆ. ನಿರೋಧದಿಂದ ಹುಟ್ಟಿದ ಸಂಸ್ಕಾರಗಳು ಮಾತ್ರ ಏಕಾಗ್ರತೆಯಿಂದ ಹುಟ್ಟಿದ ಸಂಸ್ಕಾರಗಳನ್ನು ಹೋಗಲಾಡಿಸುತ್ತಾ ಅವು ಗಳೂ ಕೂಡ ಹೋಗುತ್ತವೆ.

ಇದಕ್ಕೆ ದೃಷ್ಟಾಂತರ ಹೇಗೆಂದರೆ:—ಬೆಳ್ಳಿಯಲ್ಲಿ ಸೀಸವನ್ನು ಸೇರಿಸಿ ಊದಿದರೆ, ಬೆಳ್ಳಿಯಲ್ಲಿರುವ ಮಲಿನವನ್ನು ಹೋಗಲಾಡಿಸಿ ಆಮೇಲೆ ಅದೂಕೂಡ (ಸೀಸವು) ಹೋಗುವಹಾಗೆ ಎಂದು ತಿಳಿಯಬೇಕು. ಈ ಅಸಂಪ್ರಜ್ಞಾತ ಸಮಾಧಿಗೆ ಉತ್ತಮ ವೈರಾಗ್ಯವೇ ಕಾರಣ.

**ಅ|| ಯೋಗಾಭ್ಯಾಸಕ್ಕಾಗಿ ಉಪಾಯವನ್ನು ಹೇಳುತ್ತಾ ಸಾನಂದ, ಸಾಸ್ಮಿತ ಸಮಾಧಿಗಳಲ್ಲಿರುವವರ ಸ್ವರೂಪವನ್ನು ನಿರೂಪಿಸುತ್ತಾರೆ.**

೧೯. ಸೂ|| ಭವಪ್ರತ್ಯಯೋ ವಿದೇಹ ಪ್ರಕೃತಿಲಯಾನಾಮ್ ||

ತಾ|| ವಿದೇಹಿಗಳ ಮತ್ತು ಪ್ರಕೃತಿಲಯಗಳ ಸಮಾಧಿ; ಜನನ ಮರಣ ಪ್ರವಾಹ ರೂಪವಾದ ಸಂಸ್ಕಾರಕ್ಕೆ ಕಾರಣವಾದದ್ದು.

**ಭವ ಪ್ರತ್ಯಯವೆಂದರೆ**—ಪಂಚಭೂತಗಳು, ಮತ್ತು ಇಂದ್ರಿಯಗಳೆಂಬ ವಿಕೃತಿ ತತ್ತ್ವಗಳಲ್ಲಿಯಾಗಲಿ ಇಲ್ಲವೆ ಅವ್ಯಕ್ತ, ಮಹತ್ತು, ಅಹಂಕಾರ, ಪಂಚ ತನ್ಮಾತ್ರಗಳೆಂಬ ಪ್ರಕೃತಿ ತತ್ತ್ವಗಳಲ್ಲಿಯಾಗಲಿ (ಮೇಲೆ ಹೇಳಿದವುಗಳೆಲ್ಲವೂ ಆತ್ಮತತ್ತ್ವವು ಆಗದಿದ್ದರೂ,) ಆತ್ಮಯೆನ್ನುವ ನೆನೆಪು, ಅದರಿಂದ ಹುಟ್ಟಿದ ಯೋಗವನ್ನು ಭವಪ್ರತ್ಯಯವೆಂದು ಹೇಳಲ್ಪಡುವುದು. ಈ ಭವಪ್ರತ್ಯಯವು ವಿದೇಹಿಗಳಿಗೂ, ಪ್ರಕೃತಿಲಯಗಳಿಗೂ ಹುಟ್ಟುತ್ತದೆ.

**ವಿದೇಹಿಗಳೆಂದರೆ**—ಸಾನಂದ ಸಮಾಧಿಯಲ್ಲಿರುವವರು. ಇವರು ಪ್ರಧಾನ ಪುರುಷರೂಪವಾದ ತತ್ತ್ವವನ್ನು ತಿಳಿಯದವರಾಗಿ ಶುದ್ಧ ಸತ್ತ್ವ ಗುಣಪರಿಣಾಮದಲ್ಲಿಯೇ ಆನಂದವನ್ನು ಹೊಂದಿರುವ ಕಾರಣ ದೇಹಾಹಂ ಕಾರವಿಲ್ಲದೆ ಇರುವರು.

ಅಂದರೆ—ಪಂಚಭೂತಗಳನ್ನೂ ಇಂದ್ರಿಯಗಳನ್ನೂ ಇವುಗಳಲ್ಲಿ ಒಂ ದೊಂದರನ್ನು ಆತ್ಮನೆಂದು ಭಾವಿಸಿ ಅವುಗಳನ್ನೇ ಉಪಾಸಿಸುವವರಿಗೆ ಅಥವ ಭಾವಿಸುವವರಿಗೆ ಆವಾಸನೆ ಅಂತಃಕರಣೆಯಲ್ಲಿ ಹಿಡಿದಿರುತ್ತದೆ. ಆದ್ದರಿಂದ ಅವರು ಶರೀರವನ್ನು ಬಿಟ್ಟಮೇಲೆ ಪಂಚಭೂತಗಳಲ್ಲಿಯಾಗಲಿ ಇಲ್ಲವೆ ಇಂದ್ರಿಯಗಳಲ್ಲಿಯಾಗಲಿ ಲಯಹೊಂದಿ ಸಂಸ್ಕಾರಗಳಲ್ಲಿ ಮಾತ್ರವಿರುವ

ಮನಸ್ಸುಳ್ಳವರಾಗಿ ಈ ಭೌತಿಕ ಶರೀರವಿಲ್ಲದವರಾಗಿರುವರು. ಇಂಥವರೇ ದೇವತೆಗಳು.

ಇವರ ಚಿತ್ತದಲ್ಲಿ ಸಂಸ್ಕಾರಗಳಿಂದ ಕೂಡಿದವರೆಂದು ಮಾತ್ರ ನೆನೆಪಿರುತ್ತದೆ; ವೃತ್ತಿಗಳಿರುವುದಿಲ್ಲ. ಇವರು ಕೆಲವುಕಾಲ ದೇವತೆಗಳಾಗಿದ್ದು, ಆ ಮೇಲೆ ಸಂಸೃತಿ ಅಥವ ಸಂಸಾರದಲ್ಲಿ ಪ್ರವೇಶಿಸುತ್ತಾರೆ. ಆದ್ದರಿಂದ ಇವರಿಗೆ ಮುಕ್ತಿಯಿಲ್ಲ. ಭೂತಗಳನ್ನು ಉಪಾಸಿಸುವವರು, ನೂರು ಮನ್ವಂತರಗಳೂ, ಇಂದ್ರಿಯಗಳನ್ನು ಉಪಾಸಿಸುವವರು· ಹತ್ತು ಮನ್ವಂತರಗಳೂ ದೇವತೆಗಳಾಗಿರುವರು· ಇವರೇ ವಿದೇಹಿಗಳೆನ್ನಲ್ಪಡುವರು.

**ಪ್ರಕೃತಿಲಯರೆಂದರೆ**—ಸಾಸ್ಮಿತ ಸಮಾಧಿಯಲ್ಲಿರುವವರು. ಇವರು ಕೂಡ ಪರಮಾತ್ಮನನ್ನು ನೋಡದೆ ಇರುವವರಾಗಿ ಶುದ್ಧ ಸತ್ತ್ವಗುಣವನ್ನು ಬಿಟ್ಟು ಚಿತ್ತಾಕಾಶದಲ್ಲಿ ನಿಂತು ಆನಂದಮಯರಾಗಿರುವರು. ಇವರ ಚಿತ್ತವು ಸ್ವಕಾರಣವಾದ ಪ್ರಕೃತಿಯಲ್ಲಿ ಲೀನವಾಗಿರುವುದು. ಆದ್ದರಿಂದ ವಿದೇಹ ಪ್ರಕೃತಿಲಯಗಳ ಯೋಗವು ಆಭಾಸವಾದದ್ದೆ. ಪರಮಾತ್ಮನನ್ನು ದರ್ಶಿಸುವವರು ಸತ್ತ್ವಾದಿಗುಣಗಳಲ್ಲಿ ಆಶೆಯನ್ನು ಬಿಟ್ಟು ವೈರಾಗ್ಯಹೊಂದಿ ಅಸಂಪ್ರಜ್ಞಾತ ಸಮಾಧಿ ದೆಸೆಯಿಂದ ಕೈವಲ್ಯ ಪದವಿಯನ್ನು ಹೊಂದಬೇಕು. ಅಂದರೆ, ಮುಕ್ತಿಯನ್ನು ಹೊಂದಬೇಕೆನ್ನುವವರು ಪರತತ್ತ್ವವನ್ನು ತಿಳಿದು ಅದನ್ನೇ ಉಪಾಸಿಸುವುದಕ್ಕೆ ಬಹಳ ಪ್ರಯತ್ನಮಾಡಬೇಕು.

ಅಂದರೆ—ಅವ್ಯಕ್ತ ತತ್ತ್ವವು, ಮಹತ್ತತ್ತ್ವವು, ಅಹಂಕಾರ (ಅಭಿಮಾನ) ತತ್ತ್ವವು ಪಂಚತನ್ಮಾತ್ರೆಗಳು, ಇವುಗಳಲ್ಲಿ ಒಂದೊಂದನ್ನು ಆತ್ಮನೆಂದು ಭಾವಿಸಿ ಉಪಾಸನೆ ಮಾಡುವುದರಿಂದ ಆ ವಾಸನೆ ಮೇಲೆ ಹೇಳಿದ ಅವ್ಯಕ್ತಾದಿಗಳಲ್ಲಿ ಒಂದರ ವಾಸನೆ ಅಂತಃಕರಣದಲ್ಲಿ ಹಿಡಿದಿರುತ್ತದೆ. ಹೀಗೆ ಅವ್ಯಕ್ತಾದಿಗಳಲ್ಲಿ ಮನಸ್ಸು ಲೀನವಾಗಿರವವರು ಶರೀರವನ್ನು ಬಿಟ್ಟಮೇಲೆ ಮುಕ್ತಿಯನ್ನನುಭವಿಸುತ್ತಾ ಇರುವ ಹಾಗೆ ತಿಳಿದಿರುತ್ತಾರೆ. ಇದರಿಂದ ಶಾಶ್ವಿತವಾದ ಕೈವಲ್ಯ ಪ್ರಾಪ್ತಿ ಸಿಕ್ಕುವುದಿಲ್ಲ.

ಹೇಗೆಂದರೆ—ಮಳೆಗಾಲವು ಹೋದಮೇಲೆ, ಮಣ್ಣಾಗಿರುವ ಕಪ್ಪೆಯು ಪುನಃ ಮಳೆ ಬಂದಮೇಲೆ ಯಾವರೀತಿ ಕಪ್ಪೆಯಾಗುತ್ತದೆಯೋ ಅದೇರೀತಿಯಾಗಿ ಅವ್ಯಕ್ತಾದಿಗಳಲ್ಲಿ ಮನಸ್ಸು ಲೀನವಾಗಿರುವವರು, ಪುನಃ ಸಂಸಾರಿಗಳಾಗುತ್ತಾರೆ. ಅವ್ಯಕ್ತ ತತ್ತ್ವವನ್ನುಪಾಸಿಸುವವರು ಲಕ್ಷ ಮನ್ವಂತರಗಳೂ ಮಹತ್ತತ್ತ್ವವನ್ನುಪಾಸಿಸುವರು ಹತ್ತು ಸಾವಿರ ಮನ್ವಂತರಗಳೂ,

ಅಹಂಕಾರ ತತ್ತ್ವವನ್ನು ಪಾಸಿಸುವವರು ಒಂದುಸಾವಿರ ಮನ್ವಂತರಗಳೂ, ಕೈವಲ್ಯವನ್ನನುಭವಿಸುವವರಹಾಗಿದ್ದು, ಪುನಃ ಸಂಸಾರಿಗಳಾಗುತ್ತಾರೆ. ಇವರೆ ಪ್ರಕೃತಿಲಯರೆನ್ನುವರು.

**ಅ|| ವಿದೇಹ ಪ್ರಕೃತಿಲಯವ್ಯತಿರಿಕ್ತರಾದ ಯೋಗಿಗಳು ಯೋಗ ಸಿದ್ಧಿಗೆ ವಿಶೇಷ ಪ್ರಯತ್ನಗಳನ್ನು ಮಾಡಬೇಕೆನ್ನುವರು.**

೨೦. ಸೂ|| ಶ್ರದ್ಧಾ ವೀರ್ಯ ಸ್ಮೃತಿ
ಸಮಾಧಿ ಪ್ರಜ್ಞಾ ಪೂರ್ವಕ ಇತರೇಷಾಮ್ ||

ತಾ|| ವಿದೇಹ ಪ್ರಕೃತಿಲಯ ವ್ಯತಿರಿಕ್ತರಾದ ಯೋಗಿಗಳ ಸಮಾಧಿಸಿದ್ಧಿಗೆ ವೀರ್ಯ, ಶ್ರದ್ಧ, ಸ್ಮೃತಿ ಸಮಾಧಿ, ಪ್ರಜ್ಞೆ ಮೊದಲಾದುವು ಕ್ರಮವಾದ ಉಪಾಯುಗಳು.

ವಿ|| ಭವಪ್ರತ್ಯಯಕ್ಕೆ ವ್ಯತಿರಿಕ್ತವಾದ ಉಪಾಯತ್ರಯ ಈ ಸೂತ್ರದಿಂದ ಹೇಳಲ್ಪಡುತ್ತದೆ. ವಿದೇಹಲಯ ಪ್ರಕೃತಿಗಳಿಗೆ ಬೇರೆಯಾದ, ಸವಿತರ್ಕ, ನಿರ್ವಿತರ್ಕ, ಸವಿಚಾರ, ನಿರ್ವಿಚಾರ, ಸಮಾಧಿಗಳಲ್ಲಿರತಕ್ಕ ಯೋಗಿಗಳಿಗೆ, ಸಾನಂದ ಸಾಸ್ಮಿತ ರೂಪ ಸಂಪ್ರಜ್ಞಾತ ಸಮಾಧಿಗೋಸ್ಕರ ಯೋಗದಲ್ಲಿ ಶ್ರದ್ಧ (ಅಥವ ವಿಶ್ವಾಸವು) ವೀರ್ಯ (ಉತ್ಸಾಹವು) ಸ್ಮೃತಿ (ಜ್ಞಾಪಕಶಕ್ತಿ) ಸಮಾಧಿ (ಚಿತ್ತೈಕಾಗ್ರತೆ) ಪ್ರಜ್ಞ (ವಿವೇಕವು) ಇವೇ ಕ್ರಮವಾಗಿ ಸಾಧಕಗಳಾಗಿವೆ.

ಹೇಗೆಂದರೆ—ಯೋಗದಲ್ಲಿ ವಿಶ್ವಾಸವುಳ್ಳವನಿಗೆ ಮಾಡುತ್ತೇನೆಂಬ ಉತ್ಸಾಹ ಹುಟ್ಟುತ್ತದೆ. ಉತ್ಸಾಹದಿಂದ ಯೋಗವನ್ನು ಮರೆಯದೆ ಇರುವುದು ಹುಟ್ಟುತ್ತದೆ. ಯೋಗವನ್ನು ಮರೆಯದೆ ಇರುವುದರಿಂದ ಚಿತ್ತೈಕಾಗ್ರತೆ ಹುಟ್ಟುತ್ತದೆ. ಚಿತ್ತೈಕಾಗ್ರತೆಯಿಂದ ಯೋಗವನ್ನು ತಿಳಿದುಕೊಳ್ಳುವ ವಿವೇಕ ಹುಟ್ಟುತ್ತದೆ.

ಇವು ಒಂದಕ್ಕೊಂದು ಕಾರಣವಾಗಿ ಸಂಪ್ರಜ್ಞಾತ ಸಮಾಧಿಯನ್ನು (ಪ್ರಜ್ಞೆಯನ್ನು) ಹುಟ್ಟಿಸುತ್ತದೆ. ಈ ಸಂಪ್ರಜ್ಞಾತ ಸಮಾಧಿಯನ್ನು ಅಭ್ಯಾಸಮಾಡುವುದರಿಂದಲೂ, ಅದರ ವಿಷಯದಲ್ಲಿ ವೈರಾಗ್ಯದಿಂದಲೂ, ಅಸಂಪ್ರಜ್ಞಾತ ಸಮಾಧಿ ಸಿದ್ಧಿಸುತ್ತದೆ. ಇದಕ್ಕೆ ಉಪಾಯ ಪ್ರತ್ಯಯವೆಂದು ಹೆಸರು.

**ಅ॥ ಶೀಘ್ರಕಾಲದಲ್ಲಿ ಸಮಾಧಿ ಸಿದ್ಧಿಸುವುದಕ್ಕೆ ಅಧಿಕಾರವನ್ನು ನಿರೂಪಿಸುತ್ತಾರೆ.**

೨೧. ಸೂ॥ ತೀವ್ರಸಂ ವೇಗಾನಾಮಾಸನ್ನಃ ॥

ತಾ॥ ತೀಕ್ಷ್ಣ ಸಂವೇಗವು (ಎಚ್ಚರಿಕೆಯಿಂದೊಡಗೂಡಿದ ದೃಢತರವಾದ ಸಂಸ್ಕಾರಗಳು) ಳ್ಳವರಿಗೆ ಸಂಪ್ರಜ್ಞಾತ ಸಮಾಧಿ ಬಹಳ ಹತ್ತಿರ.

ವಿ॥ ಸಂವೇಗವೆಂದರೆ ಕಾರ್ಯಸಾಧಕವಾದ ಬಹಳ ದೃಢತರವಾಗಿರತಕ್ಕ (ವೈರಾಗ್ಯ) ಸಂಸ್ಕಾರವು. ಉಪಾಯ ಪ್ರತ್ಯಯ ಸಂಪತ್ತಿ ಬಹಳವಾಗಿರತಕ್ಕವರು. ಯೋಗವನ್ನೂ, ಅದರ ಫಲವನ್ನೂ, ಜಾಗ್ರತೆಯಾಗಿ ಹೊಂದುತ್ತಾರೆ. ಉಪಾಯಸಂಪತ್ತಿಯುಳ್ಳವರಿಗೆ ತೀವ್ರಸಂವೇಗಿಗಳೆಂದು ಹೆಸರು.

**ಅ॥ ದೃಢತರ ಸಂಸ್ಕಾರ ಭೇದಗಳನ್ನು ಹೇಳುತ್ತಾರೆ.**

೨೨. ಸೂ॥ ಮೃದು ಮಧ್ಯಾದಿ ಮಾತ್ರತ್ವಾತ್ತತೋಽಪಿ ವಿಶೇಷಃ ॥

ತಾ॥ ಯೋಗಿಗಳನ್ನು ಮೃದು, ಮಧ್ಯ, ಅಧಿಕದವರೆಂದು ವ್ಯವಹರಿಸುತ್ತಾರೆ. ಈ ಮೃದು ಮಧ್ಯಾಧಿಕರಲ್ಲಿ ಒಬ್ಬರಿಗಿಂತ ಇನ್ನೊಬ್ಬರು ವಿಶೇಷಜ್ಞರು. ಆದ್ದರಿಂದ ತೀವ್ರ ಸಂವೇಗದವರಿಗಿಂತ ಹೆಚ್ಚಿನವರು.

ವಿ॥ ಮೃದೂಪಾಯಕರು, ಮಧ್ಯೋಪಾಯಕರು, ಅಧಿಮಾತ್ರೋಪಾಯಕರು, ಎಂದು ಯೋಗಿಗಳು ಮೂರುವಿಧದವರು. ಈ ಮೂವರು ಪ್ರತ್ಯೇಕ ಪ್ರತ್ಯೇಕವಾಗಿ ಮೃದುಸಂವೇಗರು, ಮಧ್ಯಸಂವೇಗರು, ತೀವ್ರಸಂವೇಗರು, ಎಂಬುದಾಗಿ ಮೂರು ವಿಧದವರು. ಆದಕಾರಣ ಯೋಗಿಗಳು ಒಂಭತ್ತು ವಿಧದವರಾಗುತ್ತಾರೆ. ಹೇಗೆಂದರೆ:—

೧. ಮೃದು ಸಂಸ್ಕಾರ ಭೇದಗಳುಳ್ಳವರು:— ಮೃದು ಮೃದು ಸಂವೇಗರು, ಮೃದು ಮಧ್ಯ ಸಂವೇಗರು, ಮೃದ್ವಧಿ ಮಾತ್ರ ಸಂವೇಗರು.

೨. ಮಧ್ಯ ಸಂಸ್ಕಾರ ಭೇದಗಳುಳ್ಳವರು:—ಮಧ್ಯ ಮೃದು ಸಂವೇಗರು, ಮಧ್ಯ ಮಧ್ಯ ಸಂವೇಗರು, ಮಧ್ಯಾಧಿ ಮಾತ್ರ ಸಂವೇಗರು.

೩. ಅಧಿಮಾತ್ರ ಸಂಸ್ಕಾರ ಭೇದಗಳುಳ್ಳವರು:—ಅಧಿಮಾತ್ರ ಮೃದು ಸಂವೇ

ಗರು, ಅಧಿಮಾತ್ರ ಮಧ್ಯ ಸಂವೇಗರು, ಅಧಿಮಾತ್ರಾಧಿ ಮಾತ್ರ ಸಂವೇಗರು. ಅಂದರೆ:—

೧. ಮೃದು ಸಂವೇಗ ಮೃದೂಪಾಯ ವಿರುವವನು.

೨. ಮಧ್ಯ ಸಂವೇಗ ಮೃದೂಪಾಯ ವಿರುವವನು.

೩. ತೀವ್ರ ಸಂವೇಗ ಮೃದೂಪಾಯ ವಿರುವವನು.

೪. ಮೃದು ಸಂವೇಗ ಮಧ್ಯೋಪಾಯ ವಿರುವವನು.

೫. ಮಧ್ಯ ಸಂವೇಗ ಮಧ್ಯೋಪಾಯ ವಿರುವವನು.

೬. ತೀವ್ರ ಸಂವೇಗ ಮಧ್ಯೋಪಾಯ ವಿರುವವನು.

೭. ಮೃದು ಸಂವೇಗಾಧಿ ಮಾತ್ರೋಪಾಯ ವಿರುವವನು.

೮. ಮಧ್ಯ ಸಂವೇಗಾಧಿ ಮಾತ್ರೋಪಾಯ ವಿರುವವನು.

೯. ತೀವ್ರ ಸಂವೇಗಾಧಿ ಮಾತ್ರೋಪಾಯ ವಿರುವವನು.

ಎಂದು ಯೋಗಿಗಳು ನವವಿಧದವರೆಂದು ಹೇಳಲ್ಪಟ್ಟಿತು. (ತೀವ್ರ ಸಂವೇಗಾಧಿ ಮಾತ್ರೋಪಾಯನಾಗುವುದಕ್ಕೆ ತಕ್ಕ ಪ್ರಯತ್ನಗಳನ್ನು ಮಾಡಬೇಕೆಂಬುವುದಕ್ಕಾಗಿ ಯೋಗಿಗಳು ೯ ವಿಧದವರೆಂದು ಹೇಳಲ್ಪಟ್ಟರು.)

**ಅ|| ಮೇಲೆ ಹೇಳಿದ ಉಪಾಯಗಳಿಗಿಂತ ಸುಲಭವಾದದ್ದನ್ನು ಹೇಳುತ್ತಾರೆ.**

## ೨೩. ಸೂ|| ಈಶ್ವರ ಪ್ರಣಿಧಾನಾದ್ವಾ ||

**ತಾ|| ಈಶ್ವರೋಪಾಸಕನು, ವಿಧ್ಯುಕ್ತ ಕರ್ಮಗಳನ್ನಾಚರಿಸಿ ಭಕ್ತಿಯಿಂದ ಸಮಸ್ತವನ್ನು ಈಶ್ವರಾರ್ಪಣವೆಂದು ಮಾಡಿದರೆ ಅಂಥವನಿಗೆ ಜಾಗ್ರತೆಯಾಗಿ ಯೋಗ ಸಿದ್ಧಿಸುತ್ತದೆ.**

ವಿ|| ಈಶ್ವರೋಪಾಸನೆ ಸುಲಭವಾದದ್ದು. ಪ್ರಣಿಧಾನವೆಂದರೆ:—ಭಕ್ತಿ ವಿಶೇಷದಿಂದ ಕೂಡಿದ ಉಪಾಸನೆ. ವಿಷಯಗಳಿಂದ ಹುಟ್ಟುವ ಸುಖದ ನಿಮಿತ್ತವಾಗಿ ಕರ್ಮಗಳಾಚರಿಸದೆ, ಸಮಸ್ತ ಕರ್ಮಗಳನ್ನು ಈಶ್ವರನಿಗೆ ಸಮರ್ಪಿಸಬೇಕು. ಇದು ಯೋಗವು ಲಭಿಸುವುದಕ್ಕೂ ಅದರ ಫಲವು ಸಿದ್ಧಿಸುವುದಕ್ಕೂ ದೊಡ್ಡದಾದ ಉಪಾಯ. ಈ ಭಕ್ತಿ ಕಾಯಿಕ, ಮಾನಸಿಕ, ವಾಚಕವಾದದ್ದು.

**ಅ|| ಈಶ್ವರ ಪ್ರಣಿಧಾನದಿಂದ ಸಮಾಧಿಲಾಭವು ಸುಲಭವಾಗಿ ಹುಟ್ಟುತ್ತದೆಯೆಂದು, ಇನ್ನು ಆ ಈಶ್ವರನ ಸ್ವರೂಪವನ್ನು, ಈಶ್ವರ ನಿರುವನೆಂಬುದಕ್ಕೆ ಪ್ರಮಾಣವನ್ನು, ಈಶ್ವರನ ಮಹಾತ್ಮೆಯನ್ನು, ಈಶ್ವರನನ್ನು ತಿಳಿಸಲ್ಪಡುವ ಶಬ್ದವನ್ನು, ಈಶ್ವರನನ್ನು ಉಪಾಸಿಸುವ ಕ್ರಮವನ್ನು, ಈಶ್ವರೋಪಾಸನೆಯಿಂದ ಪ್ರಯೋಜನವನ್ನು, ಕ್ರಮವಾಗಿ ಹೇಳುವುದಕ್ಕೆ ಉಪಕ್ರಮಿಸಿ ಈಗ ಈಶ್ವರನ ಸ್ವರೂಪವನ್ನು ಹೇಳುತ್ತಾರೆ.**

೨೪. ಸೂ|| ಕ್ಲೇಶ ಕರ್ಮ ವಿಪಾಕಾಶಯೈ ರಪರಾಮೃಷ್ಟಃ
ಪುರುಷವಿಶೇಷ ಈಶ್ವರಃ ||

ತಾ|| ಅವಿದ್ಯಾದಿ ಕ್ಲೇಶಗಳು, ಪುಣ್ಯ-ಪಾಪ ಮಿಶ್ರಕರ್ಮಗಳು, ಜಾತ್ಯಾಯುರ್ಭೋಗಗಳು, ಚಿತ್ತದಲ್ಲಿ ವಾಸನಾರೂಪವಾಗಿರುವ ಸಂಸ್ಕಾರಗಳೂ, ಎಂಬಿವುಗಳಿಂದ ಕಾಲತ್ರಯದಲ್ಲಿಯೂ ಬಾಧಿಸದೆ ಇರತಕ್ಕ ಪುರುಷಶ್ರೇಷ್ಠನು ಈಶ್ವರನೆಂದನ್ನಲ್ಪಡುವನು.

ವಿ|| ಕ್ಲೇಶಗಳೆಂದರೆ:—ಅವಿದ್ಯೆ ಮೊದಲಾದುವು. (ಇವುಗಳನ್ನು ಎರಡನೆಯ ಪಾದದ ೩ನೇ ಸೂತ್ರದಲ್ಲಿ ನೋಡಬಹುದು.)

ಕರ್ಮಗಳೆಂದರೆ:—ವಿಹಿತ, ನಿಷಿದ್ಧ, ಮೂಢವೆಂದು ಮೂರು ವಿಧಗಳು.

೧. ವಿಹಿತ ಕರ್ಮಗಳೆಂದರೆ:—ಸಂಧ್ಯಾವಂದನೆ ಮೊದಲಾದದ್ದು.

೨. ನಿಷಿದ್ಧ ಕರ್ಮಗಳೆಂದರೆ:—ಪರಹಿಂಸೆ ಮೊದಲಾದದ್ದು.

೩. ಮೂಢ (ಅಥವ ಮಿಶ್ರಕರ್ಮಗಳೆಂದರೆ:—ಪುಣ್ಯ - ಪಾಪಗಳೆರಡರಿಂದ ಕೂಡಿದ್ದು.)

ವಿಪಾಕವೆಂದರೆ:—ಮೇಲೆ ವಿವರಿಸಿದ ಕರ್ಮಗಳಿಗೆ ಫಲವಾದ ಜಾತಿ, ಆಯುಸ್ಸು, ಭೋಗಗಳು. (ಇವುಗಳನ್ನು ದ್ವಿತೀಯಪಾದದ ೧೩ನೇ ಸೂತ್ರದಲ್ಲಿ ನೋಡಬಹುದು.)

ಈಶ್ವರನೆಂದರೆ:—ಮೇಲೆ ಹೇಳಿದ ಕ್ಲೇಶಾದಿಗಳಿಂದ ಸಂಬಂಧವಿದ್ದು ಅದಕ್ಕೆ ಸಿಕ್ಕದವನು.

**ಅ|| ಈಶ್ವರನ ಪ್ರಮಾಣವನ್ನು ಹೇಳುತ್ತಾರೆ.**

೨೫. ಸೂ|| ತತ್ರ ನಿರತಿಶಯಂ ಸರ್ವಜ್ಞ ಬೀಜಮ್ ||

(ಸಾರ್ವಜ್ಞ್ಯ ಬೀಜಮ್) ಎಂದು ಪಾಠಾಂತರ.

ತಾ|| ಆ ಈಶ್ವರನು ಸರ್ವಜ್ಞನೆಂದು ಹೇಳುವುದಕ್ಕೆ ಬೇಕಾದ ಹೇತುವಿದೆ. ಆದ್ದರಿಂದ ಈಶ್ವರನಿದ್ದಾನೆಂದು ಹೇಳುವುದಕ್ಕೆ ಮುಖ್ಯ ಪ್ರಮಾಣವಿದೆ.

ವಿ|| ಈಶ್ವರನು ಸರ್ವಜ್ಞತ್ವಕ್ಕೆ ಬೀಜವು (ಕಾರಣವು) ಎಂದು ಹೇಳುವುದರಿಂದ ಆತನಿಗಿಂತ ಮತ್ತು ಬೇರೆ ಯಾವುದೂ ಇಲ್ಲವೆಂದು ಏರ್ಪಟ್ಟಿತು. ಈಶ್ವರನಲ್ಲಿಯೇ ಸರ್ವಜ್ಞತ್ವವನ್ನು ನಿರೂಪಿಸುವುದಕ್ಕೆ ಕಾರಣವೇನೆಂದರೆ, ಸ್ವತಃ ಜಡವಾದ ಚಿತ್ತದಲ್ಲಿ ಆತ್ಮಚೈತನ್ಯಾಭಿವ್ಯಕ್ತಿಯಿಂದ ಜ್ಞಾನಾದ್ಯುತ್ತಮವಾದ ಸರ್ವಧರ್ಮಗಳು ಹೆಚ್ಚಾಗಿಯೂ, ಕಮ್ಮಿಯಾಗಿಯೂ, ಮಲಿನವಾಗಿಯೂ, ನಿರ್ಮಲವಾಗಿಯೂ ಹೀಗೆ ವ್ಯತ್ಯಾಸಗಳುಳ್ಳದ್ದಾಗಿ ಪರಿಣಮಿಸುತ್ತಾದ್ದರಿಂದ ಇವುಗಳಿಗೆ ಕಾರಣನೊಬ್ಬನಿದ್ದಾನೆಂದು, ಆತನಿಂದಲೇ ಹೀಗೆ ಆಗುತ್ತದೆಂದು ತಿಳಿಯಬರುತ್ತದೆ.

ಆದ್ದರಿಂದ ನಿರತಿಶಯ (ಅದಕ್ಕಿಂತ ಮತ್ತು ಅತಿಶಯವಾದುದು ಇಲ್ಲದ್ದು, ಇಲ್ಲವೆ ಅತ್ಯಧಿಕವಾದದ್ದು) ಜ್ಞಾನಶಕ್ತಿ ಈಶ್ವರನಲ್ಲಿಯೇ ಇದೆಯೆಂದೂ, ಆತನೆ ಮೂಲಭೂತನೆಂದೂ ವಿಶದವಾಗುತ್ತದೆ.

**ಅ|| ಈಶ್ವರನ ಮಾಹಾತ್ಮ್ಯವನ್ನು ಹೇಳುತ್ತಾರೆ.**

೨೬. ಸೂ|| ಸರ್ವೇಷಾಮಪಿ ಗುರುಃಕಾಲೇ ನಾನವಚ್ಛೇದಾತ್ |

("ಸ ಏಷ ಪೂರ್ವೇಷಾ ಮಪಿ" ಎಂದೂ, "ಸ ಪೂರ್ವೇಷಾಮಪಿ") ಎಂದೂ ಪಾಠಾಂತರಗಳು.

ತಾ|| ಆ ಈಶ್ವರನು ತ್ರಿಕಾಲಾಬಾಧ್ಯನಾದುದರಿಂಪ ಬ್ರಹ್ಮಾದಿಗಳಾದವರಿಗೂ ಗುರು (ಉಪದೇಶ ಕರ್ತ) ನಾಗಿದ್ದಾನೆ.

ವಿ|| ತ್ರಿಕಾಲಗಳೆಂದರೆ:—ಭೂತಕಾಲವು (ಆಗಿಹೋದ ಕಾಲವು) ಭವಿಷ್ಯತ್ಕಾಲವು (ಆಗುವ ಕಾಲ) ವರ್ತಮಾನ ಕಾಲವು (ಆಗುತ್ತಾ ಇರುವಕಾಲ) ಈಶ್ವರನು ಈಕಾಲಗಳಿಂದ ಬಾಧಿಸಲ್ಪಡನು. ಯಾವಾಗಲೂ ಇರುವವ

ನಾದ್ದರಿಂದ ಆತನಿಗೆ ಕಾಲನಿರ್ಣಯವಿಲ್ಲ. ಅದಕ್ಕೋಸ್ಕರ ಆಗಾಗ ಜನನ ಹೊಂದುವ ಬ್ರಹ್ಮಾದಿಗಳಿಗೆ ಧರ್ಮಗಳನ್ನುಪದೇಶಿಸುವವನಾಗಿದ್ದಾನೆ.

**ಅ॥ ಈಶ್ವರೋಪಾಸನೆಗೋಸ್ಕರ ಆತನ ನಾಮವನ್ನು ಹೇಳುತ್ತಾರೆ.**

೨೭. ಸೂ॥ ತಸ್ಯ ವಾಚಕ ಪ್ರಣವಃ

ತಾ॥ ಆ ಈಶ್ವರನಿಗೆ **ಓಂಕಾರವೇ** (ಪ್ರಣವವು) ನಾಮಧೇಯವು.

ವಿ॥ ಈಶ್ವರನು "ಓಮ್" ಎಂದು ಹೇಳಲ್ಪಡುವನು. ಓಮ್ ಅನ್ನುವುದೇ ಪ್ರಣವ.

ಪ್ರಣವವೆಂದರೆ:—ಎಲ್ಲರಿಂದಲೂ ಸ್ತೋತ್ರಮಾಡಲ್ಪಡುವುದು; ಇಲ್ಲವೇ ಇದರಿಂದ ಈಶ್ವರನು ಸ್ತುತಿಸಲ್ಪಡುವನು. ಇಲ್ಲವೇ ಈಶ್ವರನನ್ನು ಇದು ಅಧಿಕವಾಗಿ ಸ್ತುತಿಮಾಡುವುದು.

ಅಂದರೆ:—ಒಬ್ಬನು ತಂದೆಯು ಒಬ್ಬನು ಮಗನು ಆಗಿರುವಾಗ ಇವನು ಈತನಿಗೆ ತಂದೆಯೆಂದೂ, ಇವನು ಈತನಿಗೆ ಮಗನೆಂದೂ ಹೇಳತಕ್ಕ ಸಂಬಂಧ (ಅಕಲ್ಪಿತವಾದ ನಿತ್ಯ ಸಂಬಂಧ)ವೆಂಥಾದ್ದೋ, ಹಾಗೆ ಈಶ್ವರನಿಗೂ ಪ್ರಣವಕ್ಕೂ ಇರುವ ನಿತ್ಯ ಸಂಬಂಧವನ್ನು ತಿಳಿದುಕೊಳ್ಳಬೇಕು.

**ಅ॥ ಈಶ್ವರೋಪಾಸನಾ ಕ್ರಮವನ್ನು ಹೇಳುತ್ತಾರೆ.**

೨೮. ಸೂ॥ ತಜ್ಜಪ ಸ್ತದರ್ಥ ಭಾವನಮ್

ತಾ॥ **ಮೂರೂವರೆ ಮಾತ್ರಿಕೆ** ಇರುವ ಓಂಕಾರವನ್ನು ಜಪ ಮಾಡುವುದಕ್ಕೂ, ಓಂಕಾರದ ಅರ್ಥವನ್ನು ಭಾವಿಸುವುದಕ್ಕೂ ಉಪಾಸನೆ ಎನ್ನುತ್ತಾರೆ.

ವಿ॥ ಓಂಕಾರದ ಮೂರೂವರೆ ಮಾತ್ರಿಕೆ ಯಾವುದೆಂದರೆ:—ಅ-ಉ-ಮ-ಅರ್ಧ ಮಾತ್ರಿಕೆ. ಇವು ಸೇರಿದ ಓಂಕಾರವನ್ನು ಪುನಃ ಪುನಃ ಚಿಂತನೆಮಾಡುವುದು ಜಪವೆನ್ನಲ್ಪಡುವುದು.

ಓಂಕಾರಾರ್ಥವನ್ನು ಭಾವಿಸುವುದೆಂದರೆ:— ಓಂಕಾರಾರ್ಥ ಪ್ರದನಾದ ಈಶ್ವರನನ್ನು ಧ್ಯಾನಮಾಡುವುದು. ಅಂದರೆ, ಯೋಗವನ್ನು ಮಾಡುತ್ತಾ ಪ್ರಣವವನ್ನುಚ್ಚರಿಸಬೇಕೆಂದು ಭಾವವು. ಪ್ರಣವ ಜಪವು ಚಿತ್ತೈಕಾಗ್ರತೆಗೆ ಉಪಾಯವಾದ್ದರಿಂದ ಸಮಾಧಿ ಸಿದ್ಧಿಗೆ ಯೋಗಿಗಳವಶ್ಯಕವಾಗಿ ಇದನ್ನು ಜಪಿಸಬೇಕು. ಇದರಿಂದ ಪರಮಾತ್ಮನು ಪ್ರಕಾಶಿಸುತ್ತಾನೆ.

**ಅ|| ಈಶ್ವರೋಪಾಸನಾ ಫಲವನ್ನು ಹೇಳುತ್ತಾರೆ.**

೨೯. ಸೂ|| ತತಃ ಪ್ರತ್ಯಕ್ಚೇತನಾಧಿಗಮೋಽ ಪ್ಯನ್ತರಾಯಾಽ ಭಾವಶ್ಚ ।

ತಾ|| ಆ ಈಶ್ವರನನ್ನು ಹೇಳುವ ಓಂಕಾರ ಜಪದಿಂದ ಚಿನ್ಮಾತ್ರ ನಾದ ಪುರುಷನ ವಿಘ್ನಗಳು ಹೋಗುತ್ತವೆ; ಜ್ಞಾನವು ಲಭಿಸುತ್ತದೆ.

ವಿ|| ತನಗಿಂತ ಬೇರೆಯಾದ ಈಶ್ವರನನ್ನು ಧ್ಯಾನಿಸುವುದರಿಂದ ಆತ್ಮಸಾಕ್ಷಾತ್ಕಾರವು ಹೇಗೆ ಉಂಟಾಗುತ್ತದೆಂದರೆ, ಈಶ್ವರಸ್ವರೂಪದ ಹಾಗೆ ಆತ್ಮಸ್ವರೂಪವಿರುವುದರಿಂದ ಈಶ್ವರೋಪಾಸನೆಯಿಂದ ಆತ್ಮಸ್ವರೂಪವು ತಿಳಿಯುತ್ತದೆ.

**ಅ|| ಯೋಗವಿಘ್ನಗಳಾದ ಅಂತರಾಯುಗಳನ್ನು ಹೇಳುತ್ತಾರೆ.**

೩೦. ಸೂ|| ವ್ಯಾಧಿ ಸ್ತ್ಯಾನ ಸಂಶಯಪ್ರಮಾದಾಲಸ್ಯಾ
ವಿರತಿ ರ್ಭ್ರಾಂತಿ ದರ್ಶನಾ ಲಬ್ಧ ಭೂಮಿಕತ್ವಾ
ನವಸ್ಥಿತತ್ವಾನಿ ಚಿತ್ತವಿಕ್ಷೇ ಪಾಸ್ತೇಽನ್ತರಾಯಃ ||

ತಾ|| ರೋಗಗಳು, ಯೋಗಕರ್ಮಾನರ್ಹತೆ, ಸಂದೇಹವು, ಅಜಾಗ್ರತೆ, ಮತ್ತತೆ, ಅತೃಪ್ತಿ, ಭ್ರಮೆ, ಸಮಾಧಿಸ್ಥಿತಿ ಕುದರದೆ ಇರುವಿಕೆ, ಚಿತ್ತಸ್ಥೈರ್ಯವಿಲ್ಲದೆ ಇರುವಿಕೆ, ಎಂಬೀ ಚಿತ್ತವಿಕಾರಗಳು ಯೋಗವಿಘ್ನಗಳೆನ್ನಲ್ಪಡುವುದು.

ವಿ|| ೧. ವಾತ-ಪಿತ್ಥ-ಶ್ಲೇಷ್ಮಾದಿ ಧಾತು ವೈಷಮ್ಯದಿಂದ ಹುಟ್ಟುವ ಜ್ವರಾದಿ ವ್ಯಾಧಿಗಳು.

೨. ಅಂಗಪಾಟವು ತಪ್ಪಿ ಚಿತ್ತವು ಕೆಲಸಮಾಡುವುದಕ್ಕೆ ಆಗದೆ ಇರತಕ್ಕ ಕರ್ಮಾನರ್ಹತೆಯೆಂಬ ಸ್ತ್ಯಾನವು.

೩. ಯೋಗವು ಸಾಧ್ಯವಾಗುವುದೋ ಇಲ್ಲವೋ ಎಂಬ ಸಂಶಯವು.

೪. ಯೋಗವನ್ನಾಚರಿಸದೆ ಉದಾಸೀನತೆಯಿಂದ ಇರುವಿಕೆ ಎಂಬ (ಅಜಾಗ್ರತೆ) ಪ್ರಮಾದವು.

೫. ಚಿತ್ತವು, ದೇಹವು, ಮದದಿಂದೊಡಗೂಡಿ ಏನೂ ತೋರದೆ ಮತ್ತತೆಯಾಗಿರುವ ಆಲಸ್ಯವು.

೬. ವಿಷಯಸುಖಾದಿಗಳಲ್ಲಿ ತೃಪ್ತಿಹೊಂದದ ಅವಿರತಿ ;

೭. ಯೋಗದಲ್ಲಿ ಭ್ರಮೆಹೊಂದಿದ ಭ್ರಾಂತಿದರ್ಶನವು.

೮. ಯಾವುದೋ ಕಾರಣಾಂತರದಿಂದ ಯೋಗವು ಹುಟ್ಟಲಿಲ್ಲವೆಂಬ ಅಲಬ್ಧ ಭೂಮಿಕತ್ವವು.

೯. ಸಮಾಧಿಸ್ಥಿತಿ ಹುಟ್ಟಿದರೂ ಅದರಲ್ಲಿ ಸ್ಥಿರತ್ವವು ಇಲ್ಲದೆಯಿರುವಿಕೆಯೆಂಬ ಅನವಸ್ಥಿತ್ವವು ಎಂಬ ಈ ಒಂಭತ್ತು ಚಿತ್ತೈಕಾಗ್ರತೆಗೆ ವಿರೋಧವಾದ್ದರಿಂದ, ಇವು ಚಿತ್ತವಿಕ್ಷೇಪಗಳೆಂದೂ, ಅಂತರಾಯ (ವಿಘ್ನ) ಗಳೆಂದೂ ಹೇಳಲ್ಪಟ್ಟಿತು.

**ಅ|| ಮತ್ತು ಕೆಲವು ಅಂತರಾಯಗಳನ್ನು ಹೇಳುತ್ತಾರೆ.**

೩೧. ಸೂ|| ದುಃಖ ದೌರ್ಮನಸ್ಯಾಙ್ಗಮೇ ಜಯತ್ವ
ಶ್ವಾಸ ಪ್ರಶ್ವಾಸಾ ವಿಕ್ಷೇಪ ಸಹ ಭುವಃ ||

ತಾ|| ದುಃಖ, ಮನಶ್ಚಂಚಲ, ನಡುಗುವಿಕೆ, ಶ್ವಾಸೆ, ಪ್ರಶ್ವಾಸೆ, ಎಂಬಿವುಗಳು ಚಿತ್ತವಿಕ್ಷೇಪಕ್ಕೆ ಸಹಕಾರಿಗಳು.

ವಿ|| ದುಃಖವೆಂದರೆ:—ಅನುತಾಪದಿಂದ ಹುಟ್ಟಿದ ಚಿತ್ತಕ್ಷೋಭವು. ಈ ದುಃಖವು ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂದು ಮೂರು ವಿಧಗಳು. ಈ ಆಧ್ಯಾತ್ಮಿಕವು, ಶರೀರ, ಮಾನಸಿಕವೆಂದು ಎರಡು ವಿಧಗಳು. ಶರೀರವು-ಜ್ವರವೇ ಮೊದಲಾದುವು. ಮಾನಸಿಕ-ಕಾಮವೇ ಮೊದಲಾದುದರಿಂದ ಹುಟ್ಟುವಿಕೆ. ಆಧಿಭೌತಿಕವು-ಹುಲಿಗಳು ಮೊದಲಾದುವುಗಳಿಂದ ಹುಟ್ಟುವಿಕೆ. ಆಧಿದೈವಿಕವು-ಪಿಶಾಚವೇ ಮೊದಲಾದುವುಗಳಿಂದ ಹುಟ್ಟುವಿಕೆ.

ದೌರ್ಮನಸ್ಯವೆಂದರೆ :—ಬಾಹ್ಯಾಭ್ಯಂತರ ಕಾರಣಗಳಿಂದಾಗಲಿ, ಕೋರಿಕೆ ಪೂರ್ತಿಯಾಗದೆ ಇರುವುದರಿಂದಾಗಲಿ, ಮನಸ್ಸು ಸ್ಥಿರವಿಲ್ಲದೆ ಚಂಚಲವಾಗಿರುವಿಕೆ.

ಅಂಗಮೇ ಜಯತ್ವವೆಂದರೆ :—ಆಸನವು (ಕೂತುಕೊಳ್ಳುವಿಕೆ.) ಮನಸ್ಸು, ಸ್ಥಿರವಾಗಿ ನಿಲ್ಲದೆ ಚಂಚಲವಾಗಿರುವಿಕೆ.

ಶ್ವಾಸವೆಂದರೆ:—ಬಾಹ್ಯದಲ್ಲಿರುವ ಗಾಳಿಯನ್ನು ದೇಹದೊಳಕ್ಕೆ ಹೆಚ್ಚಾಗಿ ತೆಗೆಯುವಿಕೆ. ಇದೇ ಉಚ್ಛ್ವಾಸ.

ಪ್ರಶ್ವಾಸವೆಂದರೆ :—ದೇಹದಲ್ಲಿರುವ ಗಾಳಿಯನ್ನು ಹೆಚ್ಚಾಗಿ ಬಹಿರ್ಗತೆ ಮಾಡುವಿಕೆ. ಇದೇ ನಿಶ್ವಾಸ.

**ಅ|| ಚಿತ್ತವಿಕ್ಷೇಪ ನಿವಾರಣೆಗೋಸ್ಕರ ಇತರೋಪಾಯವನ್ನು ಹೇಳುತ್ತಾರೆ.**

೩೨. ಸೂ|| ತತ್ಪ್ರತಿಷೇಧಾರ್ಥ ಮೇಕ ತತ್ತ್ವಾ ಭ್ಯಾಸಃ |

ತಾ|| ಆ ಚಿತ್ತ ವಿಕ್ಷೇಪಗಳ ನಿವಾರಣೆಗೋಸ್ಕರ ತನಗೆ ಇಷ್ಟವಾದ ಏಕತತ್ವವನ್ನು ಅಭ್ಯಾಸ ಮಾಡಬೇಕು.

ವಿ|| ತನಗೆ ಅಭಿಮತವಾದ ಯಾವುದಾದರೂ ಒಂದು ತತ್ತ್ವಾಭ್ಯಾಸದಿಂದ ಚಿತ್ತ ವಿಕ್ಷೇಪಗಳನ್ನು ನಿವರ್ತಿಸಬೇಕು. ಅಂದರೆ, ಒಂದು ತತ್ತ್ವದಲ್ಲಿ ಮನಸ್ಸನ್ನು ನಿಲ್ಲಿಸುವುದಕ್ಕೆ ಅಭ್ಯಾಸ ಮಾಡಬೇಕು.

ಬೌದ್ಧ ಮತದಲ್ಲಿ ಚಿತ್ತವು ಕ್ಷಣಿಕವೆಂದು ಹೇಳಲ್ಪಟ್ಟಿದೆ. ಕ್ಷಣಿಕವೆಂದರೆ, ಕ್ಷಣಕ್ಷಣಕ್ಕೂ ಒಂದೊಂದು ಚಿತ್ತವು ಹುಟ್ಟುವಿಕೆ. ಹಾಗೆನ್ನುವುದರಿಂದ, ಅದುಕೂಡ ಆಯಾ ವಿಷಯಗಳನ್ನು ಕುರಿತ ಜ್ಞಾನವೇ ಹೊರತು ಬೇರೆಯಲ್ಲ. ಆದುದರಿಂದ ಬೌದ್ಧನ (ವೈನಾಶಿಕನ) ಮತಪ್ರಕಾರ ಚಿತ್ತಕ್ಕೆ ಏಕಾಗ್ರತೆ ವಿನಹ ವಿಕ್ಷೇಪವೆನ್ನುವುದಿಲ್ಲದೆ ಹೋಗುತ್ತದೆ. ಇದೂ ಅಲ್ಲದೆ ಸ್ಥಿರವಾದ ಚಿತ್ತವನ್ನು ಅಂಗೀಕರಿಸದೆ ಹೋದರೆ, ಒಂದು ವಸ್ತುವನ್ನು ನೋಡುವ ನಾನು ಅದನ್ನು ಮುಟ್ಟುತ್ತೇನೆಂದು, ನೋಡುವುದಕ್ಕೂ, ಮುಟ್ಟುವುದಕ್ಕೂ, ಸಾಧನವಾದ ಒಂದು ಚಿತ್ತವಿರುವ ಹಾಗೆ ಆಗುವ ಅನುಭವಕ್ಕೆ ವಿರೋಧವು ಹುಟ್ಟುತ್ತದೆ. ಆದುದರಿಂದ ಬೌದ್ಧಮತದಲ್ಲಿ ಹೇಳಿದ ಚಿತ್ತವು ಕ್ಷಣಿಕವೆಂಬುದು ಖಂಡನೆ ಮಾಡಲ್ಪಟ್ಟಿತು.

**ಅ|| ಚಿತ್ತಸಂಸ್ಕಾರವನ್ನು ಕೊಡುವಂಥ ಬಾಹ್ಯಪರಿಕರ್ಮಗಳಾದ ಬೇರೆ ಉಪಾಯಗಳನ್ನು ಹೇಳುತ್ತಾರೆ.**

೩೩. ಸೂ|| ಮೈತ್ರೀ ಕರುಣಾ ಮುದಿ ತೋಪೇಕ್ಷಾಣಾಂ
ಸುಖ ದುಃಖ ಪುಣ್ಯಾಽಪುಣ್ಯ ವಿಷಯಾಣಾಂ
ಭಾವನಾ ತ ಶ್ಚಿತ್ತ ಪ್ರಸಾದನಮ್ ||

ತಾ|| ಸುಖವು, ದುಃಖವು, ಪುಣ್ಯ, ಪಾಪ, (ಅಪುಣ್ಯ) ಎಂಬಿವುಗಳನ್ನು ಕುರಿತು ಮೈತ್ರಿ (ಸ್ನೇಹ), ಕರುಣ (ದಯೆ) ಮುದಿತ (ಸಂತೋಷ) ಉಪೇಕ್ಷೆ (ಉದಾಸೀನ) ಎಂಬೀ ವೃತ್ತಿಗಳನ್ನು ಭಾವನೆ ಮಾಡುವುದರಿಂದ ಚಿತ್ತಕ್ಕೆ ಸ್ವೇಚ್ಛ (ಪ್ರಸಾದನವು) ಹುಟ್ಟುತ್ತದೆ.

ವಿ॥ **ಮೈತ್ರಿ ಎಂದರೆ**:—ಸುಖಿಸುತ್ತಿರುವ ಸಾಧುಗಳಲ್ಲಿ ಮಿತ್ರಭಾವನೆಯನ್ನವಲಂಬಿಸಬೇಕು.

ಕರುಣ ಎಂದರೆ:—ದುಃಖಿಸುತ್ತಿರುವವರಲ್ಲಿ ಕನಿಕರವನ್ನು ವಹಿಸಬೇಕು.

ಮುದಿತ ಎಂದರೆ:—ಪುಣ್ಯವಿದ್ದವರನ್ನು ನೋಡಿ ಸಂತೋಷಪಡಬೇಕು.

ಉಪೇಕ್ಷೆ ಎಂದರೆ:—ಪಾಪಿಗಳಲ್ಲಿ ಉದಾಸೀನತೆಯಿಂದಿರಬೇಕು. ಹೇಗೆಂದರೆ—ಸುಖವಂತರನ್ನು ನೋಡಿ ಅಸೂಯತೆ ಪಡಬಾರದು. ದುಃಖದವರನ್ನು ನೋಡಿ ಉಪೇಕ್ಷೆಯಿಂದಿರಬಾರದು. ಪುಣ್ಯವಂತರಲ್ಲಿ ದ್ವೇಷವು ಮಾಡಬಾರದು. ಪಾಪಿಗಳ ಪಾಪಗಳನ್ನು ನೋಡಿ ಒಪ್ಪಿಕೊಳ್ಳಬಾರದು. ಮತ್ತು ಅವರಲ್ಲಿ ದ್ವೇಷವು ಕೂಡ ವಹಿಸಬಾರದು.

ಹೀಗೆ ದ್ವೇಷರಾಗಾದಿಗಳಿಗೆ ಪ್ರತಿಕೋಟಿಗಳಾದ (ವಿರೋಧಿಗಳಾದ) ಮೈತ್ರ್ಯಾದಿಗಳನ್ನು ಭಾವನೆ ಮಾಡುವುದರಿಂದ (ಮೈತ್ರಾದ್ಯಾಚರಣೆಯಿಂದ) ಚಿತ್ತವು ಪ್ರಸನ್ನವಾಗಿ ಸಂಪ್ರಜ್ಞಾತ ಸಮಾಧಿಗಳಿಗೆ ಉಪಯುಕ್ತವಾಗುತ್ತದೆ. ಅಂದರೆ, ರಾಗ ದ್ವೇಷಾದಿಗಳೇ ಚಿತ್ತವಿಕ್ಷೇಪಗಳನ್ನು ಹುಟ್ಟಿಸುತ್ತವೆ. ಮೈತ್ರ್ಯಾದಿ ಮೂಲಕವಾಗಿ ಆರಾಗಾದಿಗಳನ್ನು ನಿರ್ಮೂಲ ಮಾಡಬಹುದು. ಹಾಗೆ ಮಾಡುವುದರಿಂದ ಚಿತ್ತವು ಪ್ರಸನ್ನವಾಗಿ ಏಕಾಗ್ರತೆಯನ್ನು ಹೊಂದುವುದು.

**ಅ॥ ಚಿತ್ತೈಕಾಗ್ರತೆಗೆ ಅನ್ಯೋಪಾಯವನ್ನು ಹೇಳುತ್ತಾರೆ.**

೩೪. ಸೂ॥ ಪ್ರಚ್ಛರ್ದನ ವಿಧಾರಣಾಭ್ಯಾಂ ವಾ ಪ್ರಾಣಸ್ಯ ॥

ತಾ॥ ಪ್ರಾಣವಾಯುವನ್ನು (ಉಸಿರನ್ನು) ಬಿಡುವುದರಿಂದಲೂ, ನಿಲ್ಲಿಸುವುದರಿಂದಲೂ, (ರೇಚಕ, ಪೂರಕ, ಕುಂಭಕಗಳಿಂದ) ಚಿತ್ತೈಕಾಗ್ರತೆ (ಚಿತ್ತಸ್ಥೈರ್ಯ) ಹುಟ್ಟುವುದು.

ವಿವರಣೆ. ಪ್ರಚ್ಛರ್ದನವೆಂದರೆ:—ಒಳಗಿನ ಉಸಿರನ್ನು ನಿಯಮಪೂರ್ವಕವಾಗಿ ಬಿಡುವಿಕೆ. ಇದೇ ರೇಚಕ.

ವಿಧಾರಣವೆಂದರೆ:—ಒಳಗಿನ ಗಾಳಿಯನ್ನು ಈಚೆಗೆ ಬಿಡದೆ ಹಿಡಿದು ಇರಿಸುವಿಕೆ; ಇದೇ ಕುಂಭಕವು, ಇದು ಈಚೆಯ ಗಾಳಿಯನ್ನು ಒಳಗೆ ಹೋಗುವ ಹಾಗೆ ಮಾಡಿ ಅದನ್ನು ನಿಲ್ಲಿಸುವುದರಿಂದಾಗಲಿ, ಹೊಸದಾಗಿ ಒಳಗೆ ಹೋಗದೆ ಆಗ್ಗೆ ಇರುವ ಗಾಳಿಯನ್ನು ಮಾತ್ರ ಹಿಡಿಯುವುದರಿಂದಾಗಲಿ ಆಗುವುದು. ಇವುಗಳಲ್ಲಿ ಈಚೆಯ ಗಾಳಿಯನ್ನು ಒಳಕ್ಕೆ ಹೋಗುವ

ಹಾಗೆ ಮಾಡುವುದಕ್ಕೆ ಪೂರಕವೆಂದು ಹೇಳಲ್ಪಡುವುದು. (ಕುಂಭಕದಲ್ಲಿ ಪೂರಕವು ಸೇರಿರುವುದರಿಂದ ಪೂರಕವನ್ನು ಕುರಿತು ಸೂತ್ರದಲ್ಲಿ ಹೇಳಲಿಲ್ಲ) ಈ ಮೂರೂ ಪ್ರಾಣಾಯಾಮವೆನ್ನಲ್ಪಡುವುದು. ಇದರಿಂದ ಚಿತ್ತಸ್ಥಿರತ್ವವಾಗುವುದು.

ಮತ್ತು ಪ್ರಾಣಾಯಾಮವು ನಾಡಿಯನ್ನು ಶುದ್ಧಿಮಾಡುವುದು. ಸಕಲ ದೋಷಗಳನ್ನು ಹೋಗಲಾಡಿಸುವುದು. ಇದರಿಂದ ಚಿತ್ತೈಕಾಗ್ರತೆ ಹುಟ್ಟುವುದೆಂದು ಹೇಳುವುದರಿಂದ ೩೩ನೇ ಸೂತ್ರದಲ್ಲಿ ಹೇಳಿದ ಮೈತ್ರ್ಯಾದಿಗಳನ್ನು ಬಿಟ್ಟು ಪ್ರಾಣಾಯಾಮವನ್ನು ಮಾತ್ರ ಮಾಡಿದರೆ ಸಾಕೆಂದೆಣಿಸದೆ ಈ ಯೆರಡನ್ನೂ ಅವಲಂಬಿಸಬೇಕು. (ಈ ವಿಷಯವು ೨ನೇಯ ಪಾದ ೪೯ನೇಯ ಸೂತ್ರದಲ್ಲಿ ವಿವರಿಸಲ್ಪಡುವುದು.

**ಅ॥ ಸಂಪ್ರಜ್ಞಾತ ಸಮಾಧಿಗೆ ಮುಂದೆ ಚಿತ್ತಸ್ಥೈರ್ಯವನ್ನು ಹುಟ್ಟಿಸುವ ಬೇರೆ ಉಪಾಯವನ್ನು ಹೇಳುತ್ತಾರೆ.**

೩೫. ಸೂ॥ ವಿಷಯವತೀ ವಾ ಪ್ರವೃತ್ತಿರುತ್ಪನ್ನಾ ಸ್ಥಿತಿ ನಿಬಂಧಿನೀ ॥

ತಾ॥ ಶಬ್ದಾದಿ ವಿಷಯಗಳಿಂದ ಹುಟ್ಟುವ ಪ್ರವೃತ್ತಿಯಾದರೂ ಚಿತ್ತಸ್ಥೈರ್ಯವನ್ನು ಹುಟ್ಟಿಸುತ್ತದೆ.

ವಿ॥ ಯೋಗಾಭ್ಯಾಸಿ ನಾಸಾಗ್ರದಲ್ಲಿ (ಮೂಗಿನ ಕೊನೆಯಲ್ಲಿ) ಚಿತ್ತವನ್ನು ನಿಲ್ಲಿಸಿದರೆ ದಿವ್ಯ ಗಂಧ ಜ್ಞಾನವು; ಜಿಹ್ವಾಗ್ರದಲ್ಲಿ (ನಾಲಿಗೆ ಕೊನೆಯಲ್ಲಿ) ಚಿತ್ತವನ್ನು ನಿಲ್ಲಿಸಿದರೆ ದಿವ್ಯ ರಸ ಜ್ಞಾನವು; ತಾಲು ಮೂಲದಲ್ಲಿ (ದವಡೆಯಲ್ಲಿ) ಚಿತ್ತವನ್ನು, ನಿಲ್ಲಿಸಿದರೆ ದಿವ್ಯ ರೂಪ ಜ್ಞಾನವು; ಜಿಹ್ವಾ ಮಧ್ಯದಲ್ಲಿ (ನಾಲಿಗೆ ಮಧ್ಯದಲ್ಲಿ) ಚಿತ್ತವನ್ನು ನಿಲ್ಲಿಸಿದರೆ ದಿವ್ಯ ಸ್ಪರ್ಶ ಜ್ಞಾನವು; ಜಿಹ್ವಾ ಮೂಲದಲ್ಲಿ (ನಾಲಿಗೆ ಕೆಳಗಡೆ) ಚಿತ್ತವನ್ನು ನಿಲ್ಲಿಸಿದರೆ ದಿವ್ಯ ಶಬ್ದ ಜ್ಞಾನವು ಹುಟ್ಟುವುದು.

**ಅ॥ ಮೇಲೆ ವಿವರಿಸಿದ ಚಿತ್ತ ಸ್ಥೈರ್ಯಕ್ಕೆ ಬೇರೊಂದು ಉಪಾಯವನ್ನು ಹೇಳುತ್ತಾರೆ.**

೩೬. ಸೂ॥ ವಿಶೋಕಾ ವಾ ಜ್ಯೋತಿಷ್ಮತೀ ॥

ತಾ॥ ರಜಸ್ತಮೋ ಗುಣಗಳಿಂದ ಹುಟ್ಟುವ ದುಃಖ (ಶೋಕ) ವಿಲ್ಲದ ಸಾತ್ವಿಕ ಪ್ರಕಾಶಾವಲೋಕನದಿಂದ, ಸಕಲ ವೃತ್ತಿಗಳು ಲಯವಾಗಿ ಚಿತ್ತವು ಸ್ಥಿರವಾಗಿರುವುದು.

ವಿ॥ ವಿಶೋಕಾ=ಶೋಕವಿಲ್ಲದ್ದು; ಜ್ಯೋತಿಷ್ಮತೀ=ಒಳ್ಳೆಯ ಜ್ಯೋತಿ, ಅಂದರೆ, ಸತ್ತ್ವಗುಣ ಸಂಬಂಧವಾದ ಪ್ರಕಾಶ.

ಹೃದಯ ಕಮಲ ಮಧ್ಯದಲ್ಲಿ ಅಲೆಗಳಿಲ್ಲದ ಕ್ಷೀರ ಸಮುದ್ರದೋಪಾದಿಯಲ್ಲಿರುವ ಚಿತ್ತದ ಸತ್ತ್ವವನ್ನು ಭಾವನೆ ಮಾಡುವುದರಿಂದಾಗುವ ತೇಜಸ್ಸಿನಿಂದ (ಅಂದರೆ ಸಾತ್ತ್ವಿಕ ಪ್ರಕಾಶಾವಲೋಕನದಿಂದ,) ವ್ಯಕ್ತಿಗಳೆಲ್ಲವೂ ನಾಶವಾಗುತ್ತದೆ. ಆದ್ದರಿಂದ ಚಿತ್ತಕ್ಕೆ ಸ್ಥೈರ್ಯವು ಹುಟ್ಟುತ್ತದೆ.

**ಅ॥ ಉಪಾಯಾಂತರವನ್ನು ಬೋಧಿಸಬೇಕೆಂದು ತತ್ಪ್ರಯೋಜನವಾದ ಅಸಂಪ್ರಜ್ಞಾತ ಸಮಾಧಿಯ ಲಕ್ಷಣವನ್ನು ಹೇಳುತ್ತಾರೆ.**

೩೭. ಸೂ॥ ವೀತರಾಗ ವಿಷಯಂ ವಾ ಚಿತ್ತಮ್ ॥

**ತಾ॥ ಲೋಕ ವ್ಯಾಪಾರಗಳಲ್ಲಿ ಆಶೆಯು, ಆ ವ್ಯಾಪಾರಗಳ ಭಾವನೆಯಿಲ್ಲದ ಚಿತ್ತವು ಸ್ಥೈರ್ಯವನ್ನು ಹೊಂದುತ್ತದೆ.**

ವಿ॥ ವಿಷಯಾದಿಗಳಲ್ಲಿ ಅಭಿಲಾಷೆಯನ್ನು, ಅವುಗಳ ಜ್ಞಾಪಕವನ್ನು ಚಿತ್ತಕ್ಕೆ ಬಾರದ ಹಾಗೆ ಮಾಡುವವರ ಚಿತ್ತವು ಏಕಾಗ್ರವಾಗಿರುವುದು.

ಇದು ಅಸಂಪ್ರಜ್ಞಾತ ಸಮಾಧಿಗೆ ಕಾರಣವಾದ ಉಪಾಯವು. ಆದುದರಿಂದ, ನಿರ್ವಿಷಯಕವಾದ ಚಿತ್ತವೇ ಆ ಸಮಾಧಿಗೆ ಸಾಧಕವಾದುದು. ಮತ್ತು ವೇದವ್ಯಾಸರೇ ಮೊದಲಾದವರು ವಿಷಯಾದಿಗಳಲ್ಲಿ ಅಭಿಲಾಷೆಯಿಲ್ಲದೆ ಇರುವವರು. ಇಂಥವರ ಚಿತ್ತವನ್ನು ಭಾವನೆ ಮಾಡುವುದರಿಂದ ಭಾವನೆ ಮಾಡುವವರ ಚಿತ್ತವು ವೇದವ್ಯಾಸಾದಿಗಳಂಥಾದ್ದಾಗುತ್ತದೆಂದು ಹೇಳಲ್ಪಟ್ಟಿದೆ.

**ಅ॥ ಮೇಲೆ ವಿವರಿಸಿದುದನ್ನು ಕುರಿತು ಬೇರೆ ವಿಧವಾಗಿ ಹೇಳುತ್ತಾರೆ.**

೩೮. ಸೂ॥ ಸ್ವಪ್ನ ನಿದ್ರಾ ಜ್ಞಾನಾಲಮ್ಬನಂ ವಾ ।

**ತಾ॥ ಸ್ವಪ್ನ ಜ್ಞಾನವನ್ನಾಗಲಿ, ನಿದ್ದೆಯ (ಸುಷುಪ್ತಿ) ಜ್ಞಾನವನ್ನಾಗಲಿ, ಭಾವನೆ ಮಾಡುವ ಚಿತ್ತವು ಸ್ಥೈರ್ಯವಾಗಿರುವುದು.**

ವಿ॥ ಸ್ವಪ್ನವೆಂದರೆ—ಬಾಹ್ಯೇಂದ್ರಿಯಗಳ ವ್ಯಾಪಾರವಿಲ್ಲದೆ ಮನೋಮಾತ್ರದಿಂದಲೇ ವಿಷಯಾನುಭವವು (ಸುಖದುಃಖಾನುಭವವು) ಹುಟ್ಟುವುದೋ ಅಂಥಾ ಅವಸ್ಥೆ ಸ್ವಪ್ನವು ಅಂದರೆ:—ಸ್ವಪ್ನದಲ್ಲಿ ನಿರ್ಜನ ಪ್ರದೇಶದ ಅತಿ ರಮ್ಯವಾಗಿರುವ ಮಹೇಶ್ವರ ಸ್ವರೂಪವನ್ನು (ವಿಗ್ರಹವನ್ನು) ನೋಡಿ ಎಚ್ಚ

ರಿತು ಆ ಸ್ವರೂಪವನ್ನೇ ಭಾವನೆ ಮಾಡುವುದರಿಂದ ಚಿತ್ತ ಸ್ಥೈರ್ಯವು ಹುಟ್ಟುವುದು.

ಸ್ವಪ್ನದ ಹಾಗಿರುವ ಅಭ್ಯಾಸದಿಂದ ಸಂಪ್ರಜ್ಞಾತ ಸಮಾಧಿಗೂ, ಸುಷುಪ್ತಿಯ ಹಾಗಿರುವ ಅಭ್ಯಾಸದಿಂದ ಅಸಂಪ್ರಜ್ಞಾತ ಸಮಾಧಿಗೂ ಸಾಧಕವಾಗುವುದೆಂದು ತಿಳಿಯಬೇಕು.

ನಿದ್ದೆಹೋಗಿ ಎಚ್ಚರಿತ ಮೇಲೆ ತನಗೆ ಸುಖವಾಗಿ ನಿದ್ದೆ ಹತ್ತಿತೆಂದು ಯಾವಾಗ ತೋರುವುದೋ, ಆ ನಿದ್ದೆ ಸಾತ್ತ್ವಿಕ ನಿದ್ದೆ. ಅಂಥ ಸಮಯದಲ್ಲಿ ಚಿತ್ತವು ಸ್ಥೈರ್ಯವಾಗಿರುತ್ತದೆ. (ನಿದ್ದೆಯ ಸ್ವರೂಪವನ್ನು ಈ ಪಾದದ ೧೦ನೇ ಸೂತ್ರದಲ್ಲಿ ಹೇಳಲ್ಪಟ್ಟಿದೆ.)

**ಅ॥ ಯೋಗಿಗೆ ಇಷ್ಟವಾದ ವಸ್ತುವನ್ನು ಧ್ಯಾನಮಾಡುವುದರಿಂದ ಚಿತ್ತಕ್ಕೆ ಸ್ಥೈರ್ಯವು ಹುಟ್ಟುತ್ತದೆ.**

೩೯. ಸೂ॥ ಯಥಾಭಿ ಮತ ಧ್ಯಾನಾ ದ್ವಾ ।

ತಾ॥ ತನಗೆ ಇಷ್ಟವಾದ ವಸ್ತುವನ್ನು ಧ್ಯಾನಿಸುವುದರಿಂದ ಚಿತ್ತಕ್ಕೆ ಸ್ಥೈರ್ಯವು ಹುಟ್ಟುತ್ತದೆ.

ವಿ॥ ಲೋಕದಲ್ಲಿ ಮನುಷ್ಯರಿಗೆ ಅನೇಕ ವಿಧಗಳಾದ ವಾಸನೆಗಳಿರುವುದಕ್ಕೋಸ್ಕರ ಯೋಗಿಯಾದವನಿಗೆ ಯಾವ ವಸ್ತುವಿನಲ್ಲಿ ವಾಸನೆ ಅಧಿಕವಾಗಿದ್ದು ಅದರಲ್ಲಿ ಶ್ರದ್ಧೆ ಹುಟ್ಟಿದೆಯೋ, ಆ ವಸ್ತುವನ್ನು ಧ್ಯಾನ ಮಾಡಿದರೂ, ಚಿತ್ತಕ್ಕೆ ಸ್ಥೈರ್ಯ ಹುಟ್ಟುತ್ತದೆ.

ಅಂದರೆ :—ಬಾಹ್ಯ ವಸ್ತುಗಳಾದ ಚಂದ್ರಾದಿಗಳಾಗಲಿ, ಒಳಗಿನ ವಸ್ತುಗಳಿಂದ ನಾಡೀ ಚಕ್ರಾದಿಗಳನ್ನಾಗಲಿ, ಭಾವನೆ ಮಾಡುವುದರಿಂದ ಚಿತ್ತೈಕಾಗ್ರತೆ ಹುಟ್ಟುತ್ತದೆ. ಸಹಜವಾಗಿ ತನಗಿಷ್ಟವಾದ ವಸ್ತುವು ಶಿವ, ರಾಮ, ಕೃಷ್ಣಾದಿ ರೂಪಗಳಾಗಿಯೇ ಇರುವುದು. ಆದ್ದರಿಂದ ಅಂಥ ಸ್ವರೂಪ ಧ್ಯಾನದಿಂದಲೂ ಚಿತ್ತವು ಸ್ಥಿರವಾಗಿರುವುದೆಂದು ಭಾವವು.

**ಅ॥ ಚಿತ್ತಸ್ಥೈರ್ಯದಿಂದ ಪ್ರಯೋಜನವನ್ನು ಹೇಳುತ್ತಾರೆ.**

೪೦. ಸೂ॥ ಪರಮಾಣು ಪರಮ ಮಹತ್ತ್ವಾನ್ತೋಽಸ್ಯ ವಶೀಕಾರಃ

(ಪರಮಹತ್ತ್ವಾನ್ತೋಽಸ್ಯ) ಎಂದು ಪಾಠಾಂತರವು.

ತಾ|| ಮುಂದೆ ವಿವರಿಸಿದ ಉಪಾಯಗಳಿಂದ ಚಿತ್ತವು ಸ್ಥೈರ್ಯ ವನ್ನು ಹೊಂದಿರುವಾತನಿಗೆ ಪರಮಾಣುವು ಮೊದಲು ಶ್ರೇಷ್ಠವಾದ ಮಹ ತ್ತತ್ತ್ವದ ಅಂದರೆ ಬುದ್ಧಿ ತತ್ವದ ವರೆಗೂ ವಶೀಕಾರವು ಆಗುತ್ತದೆ.

ವಿ|| ವಶೀಕಾರವೆಂದರೆ:—ಅಡ್ಡವಿಲ್ಲದೆ ತಿಳಿಯುವಿಕೆ. ಚಿತ್ತ ಸ್ಥೈರ್ಯವಿದ್ದವನಿಗೆ ಅತಿ ಸೂಕ್ಷ್ಮವಾದ ಪರಮಾಣುವು ಮೊದಲು ಪರಮ ಮಹತ್ತುಗಳಾದ ಆಕಾಶಾದಿಗಳವರೆಗೂ ಚಿತ್ತವೃತ್ತಿ ಅಡ್ಡವಿಲ್ಲದೆ ಪ್ರವರ್ತಿಸುತ್ತದೆ. ಸೂಕ್ಷ್ಮ ತತ್ತ್ವಗಳು ಪರಮಾಣುಗಳಿಂದೂ, ಸ್ಥೂಲ ತತ್ತ್ವಗಳು ಆಕಾಶಾದಿ ಬುದ್ಧಿ ತತ್ತ್ವ ಪರ್ಯಂತರವೆಂದೂ ತಿಳಿಯತಕ್ಕದ್ದು.

**ಅ|| ಇದುವರೆಗೂ ಹೇಳಲ್ಪಟ್ಟ ಉಪಾಯಗಳಿಂದ ನಿರ್ಮಲವಾದ ಚಿತ್ತ ಸ್ವರೂಪದ ಲಕ್ಷಣವನ್ನು ಹೇಳುತ್ತಾರೆ.**

೪೧. ಸೂ|| ಕ್ಷೀಣೇ ವೃತ್ತೇ ರಭಿಜಾತಸ್ಯೈವ ಮಣೇರ್ಗ್ರಹೀತೃ ಗ್ರಹಣ ಗ್ರಾಹ್ಯೇಷು ತತ್ಸ್ಥತದ ಞ್ಜನತಾ ಸಮಾಪತ್ತಿಃ||

(ಅಭಿಜಾತ ಸ್ಯೇವ) ಎಂದು ಪಾಠಾಂತರವು.

ತಾ|| ವೃತ್ತಿಗಳೆಲ್ಲ ನಶಿಸಿಹೋದ ಚಿತ್ತವು ಆತ್ಮನಲ್ಲಿಯು, ಇಂದ್ರಿ ಯಗಳಲ್ಲಿಯು, ವಿಷಯಗಳಲ್ಲಿಯು ಕೂಡಿಕೊಂಡಿದ್ದರೂ, ಅದರ ಹಾಗೆ ಇರುವುದಕ್ಕೆ ಸಮಾಪತ್ತಿ ಅಥವ ಸಮಾಧಿ. ಇದು ನಿರ್ಮಲವಾದ ಸ್ಫಟಿಕ ಮಣಿಯಹಾಗೆ ಇರುವುದು.

ವಿ|| **ಗ್ರಹೀತವೆಂದರೆ**—ಆತ್ಮ (ಪುರುಷನು).

**ಗ್ರಹಣವೆಂದರೆ**—ಇಂದ್ರಿಯಗಳು.

**ಗ್ರಾಹ್ಯಗಳೆಂದರೆ**—ವಿಷಯಗಳು.

ಸೂತ್ರದಲ್ಲಿ ವಿವರಿಸಿದ ಕ್ರಮವು ಅವಿವಕ್ಷಿತವಾಗಿ ತೋರಿದರೂ ಅದನ್ನು ಯಾವಿಧವಾಗಿ ಅನ್ವಯಿಸಿಕೊಳ್ಳಬೇಕು. ಪ್ರಥಮದಲ್ಲಿ ಗ್ರಾಹ್ಯವಾದ ವಿಷ ಯಗಳಲ್ಲಿಯೇ ಯೋಗವು (ಸಮಾಧಿ-ಸಮಾಪತ್ತಿ) ಆಗುತ್ತದೆ. ಆ ಮೇಲೆ ಗ್ರಹಣವಾದ ಇಂದ್ರಿಯಗಳಲ್ಲಿ ಚಿತ್ತವು ಆಗುತ್ತದೆ. ಆಮೇಲೆ ಗ್ರಹೀತ ವಾದ ಆತ್ಮನಲ್ಲಿ ಸಮಾಧಿ ಆಗುತ್ತದೆ. ಅಂದರೆ, ಪ್ರಥಮದಲ್ಲಿಯೇ ಆತ್ಮ ನನ್ನು ಭಾವನೆ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ಭಾವವು.

ಇದಕ್ಕೆ ದೃಷ್ಟಾಂತರವಾಗಿ ಸ್ಫಟಿಕಮಣಿಯನ್ನು ಹೇಳಲ್ಪಟ್ಟಿತು. ಅಂದರೆ ಸ್ಫಟಿಕಮಣಿ ಯಾವ ಬಣ್ಣವಾಗಿರುವ ವಸ್ತುವಿನಲ್ಲಿ ಸೇರುತ್ತದೆಯೋ, ಆ ಬಣ್ಣವುಳ್ಳದ್ದಾಗಿ ಕಾಣಿಸುತ್ತದೆ. ಹಾಗೆಯೇ ವೃತ್ತಿಗಳು ಲಯಿಸಿದ ಯೋಗಿಯ ಚಿತ್ತವು ನಿರ್ಮಲವಾಗಿರುವ ಕಾರಣವನ್ನು ಹಿಡಿದು, ಚಿನ್ಮಾತ್ರ ನಾದ ಸಾಕ್ಷಿಪುರುಷನಲ್ಲಿಯಾಗಲಿ, ಇಂದ್ರಿಯಗಳಲ್ಲಿಯಾಗಲಿ, ಶಬ್ದಾದಿ ವಿಷಯಗಳಲ್ಲಿಯಾಗಲಿ, ಸೇರಿರುವಾಗ ಆಯಾ ವಸ್ತುಗಳಹಾಗೆ ಯಿರುವುದು.

ಚಿತ್ತವೃತ್ತಿಗಳು ನಾಶವಾದಮೇಲೆ ಭಾವನೆಮಾಡುವಂಥ ಚಿತ್ತಕ್ಕೆ ಪರಿಣಾಮವು ಆಗುತ್ತದೆ. ಇದೇ ಸಂಪ್ರಜ್ಞಾತ ಸಮಾಧಿ ಎನ್ನುವುದು.

(ಈ ವಿಷಯವು ಈ ಪಾದದ ೧೭ನೇ ಸೂತ್ರದಲ್ಲಿ ಹೇಳಲ್ಪಟ್ಟಿದೆ.)

**ಅ|| ಸಂಪ್ರಜ್ಞಾತ ಸಮಾಧಿ ಭೇದವಾದ ಸವಿತರ್ಕ ಸಮಾಧಿ ಲಕ್ಷಣವನ್ನು ಹೇಳುತ್ತಾರೆ.**

**೪೨.** ಸೂ|| ಶಬ್ದಾರ್ಥಜ್ಞಾನ ವಿಕಲ್ಪೈಸ್ಸಂಕೀರ್ಣಾ ಸವಿತರ್ಕಾ||

(ತತ್ರ ಶಬ್ದಾರ್ಥ ಜ್ಞಾನ) ಎಂದು ಪಾಠಾಂತರ.

ತಾ|| ಶಬ್ದ, ಅರ್ಥ, ಜ್ಞಾನ, ವಿಕಲ್ಪ, ಇವುಗಳ **ಕೂಡುವಿಕೆಗೆ ಸವಿತರ್ಕ ಸಮಾಧಿ**ಯೆನ್ನಲ್ಪಡುವುದು.

ವಿ|| ತತ್ರ ಅಂದರೆ—ಆ ಸಮಾಧಿಗಳು ನಾಲ್ಕರಲ್ಲಿಯೂ ಎಂದರ್ಥವು.

ಶ್ರೋತ್ರೇಂದ್ರಿಯ ಗ್ರಾಹ್ಯವಾದದ್ದು **ಶಬ್ದವು.** ಆ ಶಬ್ದದ ವಿವೇಚನೆ ಅರ್ಥ. ಆ ಅರ್ಥದಿಂದ ಹುಟ್ಟುವುದು ಜ್ಞಾನ. ಆ ಜ್ಞಾನವನ್ನು ಬೇರೆ ಒಂದು ವಿಧವಾಗಿ ಭೇದವಿಲ್ಲದೆ ತಿಳಿಯುವುದು ವಿಕಲ್ಪ.

'**ವಿಪ್ರಾಃ**' ಎನ್ನುವುದು ಶಬ್ದವು. ಈ ಶಬ್ದಕ್ಕೆ ವೇದ ಪಾಠಕನು (ಅಥವ ಬ್ರಾಹ್ಮಣನು) ಎಂದು ಹೆಸರು. ಬ್ರಾಹ್ಮಣನೆಂದು ತಿಳಿಯುವುದು ಜ್ಞಾನ. ಹೀಗೆ ಶಬ್ದದಲ್ಲಿ ಅರ್ಥಕ್ಕೂ ಜ್ಞಾನಕ್ಕೂ ಕೂಡ ವಿಕಲ್ಪವು (ಅಭೇದವು) ಕಾಣಿಸುತ್ತಾ ಇವೆ. ಅಭೇದಜ್ಞಾನವಿರುವಾಗ ಹುಟ್ಟುವುದೇ ಸವಿತರ್ಕ ಸಮಾಧಿ. ನಮ್ಮ ಕಿವಿಗೆ ಕೇಳಿಸುವ ಧ್ವನಿಯಿಂದ ಸೂಚಿಸುವ ಸ್ಫೋಟವೆಂಬ ನಿತ್ಯಶಬ್ದವೊಂದಿರುವುದೆಂದು ವೈಯ್ಯಾಕರಣರು ಹೇಳುತ್ತಾರೆ. ಇಲ್ಲಿ ಶಬ್ದವು ಯಾವುದಾಗಿದ್ದರೂ ಬಾಧೆಯಿಲ್ಲ (ಈ ಪಾದದ ೧೭ನೇ ಸೂತ್ರದಲ್ಲಿ ಸಮಾಧಿಗಳ ನಾಲ್ಕರ ವಿವರವು ಹೇಳಲ್ಪಟ್ಟಿದೆ).

**ಅ|| ನಿರ್ವಿತರ್ಕ ಸಮಾಧಿಯನ್ನು ಹೇಳುತ್ತಾರೆ.**

೪೩. ಸೂ|| ಸ್ಮೃತಿ ಪರಿಶುದ್ಧೌ ಸ್ವರೂಪ ಶೂನ್ಯೇ ವಾರ್ಥ ಮಾತ್ರ ನಿರ್ಭಾಸಾ ನಿರ್ವಿತರ್ಕಾ ||

ತಾ|| ತಾನು ಧ್ಯಾನಿಸುತ್ತಿರುವ ಶಬ್ದಾರ್ಥ ಜ್ಞಾನಗಳ ವಿಕಲ್ಪವು ಹೋಗಿ, ಮತ್ತು ಆ ವಸ್ತುವಿನ ಶಬ್ದಾರ್ಥ ಜ್ಞಾನಗಳ ಜ್ಞಾಪಕವೇ ಇಲ್ಲದೆ, ಆ ಧ್ಯಾನವಸ್ತುವು ಮಾತ್ರ ಅಭಿಮುಖವಾಗಿರುವುದಕ್ಕೆ ನಿರ್ವಿತರ್ಕ ಸಮಾಧಿಯೆನ್ನಲ್ಪಡುವುದು.

ವಿ|| ಶಬ್ದಾರ್ಥಗಳ ನೆನಪು ಹೋದಮೇಲೆ ತನ್ನ ಸ್ವರೂಪವು ಇಲ್ಲದಹಾಗೆ, ವಿಷಯವು ಮಾತ್ರ ಸ್ಫುರಿಸುತ್ತದೆ. ಇದೇ ನಿರ್ವಿತರ್ಕವು. ಅಂದರೆ, ತಾನು ಧ್ಯಾನಿಸುತ್ತಿರುವ ವಸ್ತುವು ಮಾತ್ರವೇ ಪ್ರಕಾಶಿಸುತ್ತದೆಂದು ಭಾವವು.

**ವಿಷಯುವೆಂದರೆ**—ಘಟವು, ಗೋವು, ಮೊದಲಾದ ವಸ್ತುಗಳು. ಬೌದ್ಧರ ಮತದಲ್ಲಿ ಪರಮಾಣುವುಗಳ ಸಮುದಾಯವು ಘಟಾದಿ ಪದಾರ್ಥಗಳೆಂದೂ, ಬೇರೆ ವಸ್ತುವಿಲ್ಲವೆಂದೂ, ಹೇಳಲ್ಪಟ್ಟಿದೆ. ಇದು ಸರಿಯಲ್ಲ. ಹೇಗೆಂದರೆ, ಪರಮಾಣುಗಳೇ ಘಟವೆಂದು ಹೇಳಿದರೆ ಅಭೇದವು, ಪರಮಾಣುಗಳಿಂದ ಘಟವಾಗಿದೆಯೆಂದು ಹೇಳುವುದರಿಂದ ಭೇದವು ಹುಟ್ಟುತ್ತದೆ. ಆದುದರಿಂದ ಘಟಕ್ಕೂ ಪರಮಾಣುಗಳಿಗೂ ತಾದಾತ್ಮ್ಯವಿದೆಯೆಂದು ತಿಳಿಯತಕ್ಕದ್ದು.

**ಅ|| ಸವಿಚಾರ ನಿರ್ವಿಚಾರ ಸಮಾಧಿ ಲಕ್ಷಣಗಳನ್ನು ಹೇಳುತ್ತಾರೆ.**

೪೪. ಸೂ|| ಏತಯೈವ ಸವಿಚಾರಾ ನಿರ್ವಿಚಾರಾ ಚ ಸೂಕ್ಷ್ಮ ವಿಷಯಾ ವ್ಯಾಖ್ಯಾತಾ ||

ತಾ|| ಸ್ಥೂಲ ವಿಷಯುಕಗಳಾದ ಸವಿತರ್ಕ ನಿರ್ವಿತರ್ಕ ಸಮಾಧಿಗಳ ನಿರೂಪಣದಿಂದ ಸೂಕ್ಷ್ಮ ವಿಷಯುಕಗಳಾದ ಸವಿಚಾರ ನಿರ್ವಿಚಾರ ಸಮಾಧಿಗಳು ವಿವರಿಸಲ್ಪಟ್ಟುವು.

ವಿ|| ಇದುವರೆವಿಗೂ ಹೇಳಲ್ಪಟ್ಟ ಸವಿತರ್ಕ ನಿರ್ವಿತರ್ಕ ಸಮಾಧಿಗಳು ಸ್ಥೂಲ ವಿಷಯುಕಗಳು. ಸವಿಚಾರ, ನಿರ್ವಿಚಾರ ಸಮಾಧಿಗಳು ಸೂಕ್ಷ್ಮ ವಿಷಯುಕಗಳು. ಮಿಕ್ಕವೆಲ್ಲವೂ ಸಮಾನಗಳಾಗಿರುವುದು.

ಹೇಗೆಂದರೆ—ಪೃಥಿವ್ಯಾದಿ ಪಂಚ ಮಹಾ ಭೂತಗಳು, ದಶೇಂದ್ರಿಯಗಳು ಸ್ಥೂಲ ಭೂತಗಳು. ಈ ಸ್ಥೂಲ ಭೂತಗಳ ಶಬ್ದಾರ್ಥಜ್ಞಾನ ವಿಕಲ್ಪಗಳುಳ್ಳದ್ದು ಸವಿತರ್ಕ ಸಮಾಧಿಯಾಗುತ್ತದೆ. ಶಬ್ದಾರ್ಥ ಜ್ಞಾನ ವಿಕಲ್ಪಗಳಿಲ್ಲದೆ ಸ್ಥೂಲ ಭೂತಗಳು ಮಾತ್ರವಿರುವುದು ನಿರ್ವಿತರ್ಕ ಸಮಾಧಿಯಾಗುತ್ತದೆ.

ಸೂಕ್ಷ್ಮ ವಿಷಯಕಗಳಾದ ತನ್ಮಾತ್ರಗಳೈದು, ಅಂತಃಕರಣವನ್ನು ಲಕ್ಷ್ಯ ಮಾಡಿಕೊಂಡು ಇವು ಯಾವಾಗ, ಎಲ್ಲಿ, ಹೇಗೆ ಹುಟ್ಟಿತೆಂದು ವಿಮರ್ಶೆಯಿಂದ ಭಾವಿಸುವುದು ಸವಿಚಾರ ಸಮಾಧಿಯಾಗುತ್ತದೆ.

ಇವು, ಯಾವಾಗ, ಎಲ್ಲಿ, ಹೇಗೆ ಹುಟ್ಟಿತೆಂದು ವಿಮರ್ಶನೆ ಇಲ್ಲದೆ ಅವುಗಳನ್ನು ಮಾತ್ರ ಭಾವಿಸುವುದು ನಿರ್ವಿಚಾರ ಸಮಾಧಿಯಾಗುತ್ತದೆ.

ಅಂದರೆ—ಸೂಕ್ಷ್ಮವಸ್ತುಗಳು ಆಗಿನದು, ಈಗಿನದು ಇದಕ್ಕೆ ಇದೇ ಹೆಸರು, ಎಂದು ಹೀಗೆ ದೇಶ, ಕಾಲನಾಮ ನಿರ್ದೇಶದಿಂದ ಭಾವಿಸುವುದು ಸವಿಚಾರ ಸಮಾಧಿಯು; ಹಾಗೆ ಭಾವಿಸದೆ ಸೂಕ್ಷ್ಮವಸ್ತುಗಳು ಮಾತ್ರ ಸ್ಫುರಿಸುವ ಸಮಾಧಿ ನಿರ್ವಿಚಾರ ಸಮಾಧಿಯೆಂದೂ ತಿಳಿಯತಕ್ಕದ್ದು.

**ಸೂಕ್ಷ್ಮವಿಷಯುಗಳೆಂದರೆ**—ಪಂಚ ತನ್ಮಾತ್ರಗಳಿಂದ ಹುಟ್ಟುವ ಪರಮಾಣುಗಳು.

**ಅ|| ಸೂಕ್ಷ್ಮವಿಷಯುಗಳ ಅವಧಿಯನ್ನು ಹೇಳುತ್ತಾರೆ.**

೪೫. ಸೂ|| ಸೂಕ್ಷ್ಮವಿಷಯತ್ವಂ ಚಾಲಿಙ್ಗ ಪರ್ಯವಸಾನಮ್ ||

ತಾ|| ಸೂಕ್ಷ್ಮವಿಷಯುಗಳೆಂಬುದು ಪ್ರಧಾನತತ್ತ್ವವೆ (ಅಲಿಂಗವು) ಕಡೆಯಾಗಿರುವುದು.

ವಿ|| ಗುಣಗಳ ಪರಿಣಾಮದಿಂದ ಹುಟ್ಟುವ ತತ್ತ್ವಗಳು ವಿಶಿಷ್ಟಲಿಂಗವೆಂದೂ, ಅವಿಶಿಷ್ಟಲಿಂಗವೆಂದೂ, ಲಿಂಗಮಾತ್ರವೆಂದೂ, ಅಲಿಂಗವೆಂದೂ ನಾಲ್ಕು ವಿಧಗಳು.

**ವಿಶಿಷ್ಟಲಿಂಗವೆಂದರೆ**—ಪಂಚಮಹಾ ಭೂತಗಳು.

**ಅವಿಶಿಷ್ಟಲಿಂಗವೆಂದರೆ**—ದಶೇಂದ್ರಿಯಗಳು, ಪಂಚತನ್ಮಾತ್ರಗಳು.

**ಲಿಂಗಮಾತ್ರವೆಂದರೆ**—ಬುದ್ಧಿ ತತ್ತ್ವವು.

**ಅಲಿಂಗವೆಂದರೆ**—ಪ್ರಧಾನ ತತ್ತ್ವವು. ಈ ಪ್ರಧಾನತತ್ತ್ವಕ್ಕಿಂತಲೂ ಸೂಕ್ಷ್ಮವಾದ ವಿಷಯವಿಲ್ಲ. ಮತ್ತು ಲಿಂಗವೆನ್ನುವುದು ಯಾವಾಗಲೂ

ಲಯಹೊಂದದೆ ಯಿರುವುದು, ಮತ್ತು ಎಲ್ಲಿಗೂ ಹೋಗದೆ ಯಿರುವುದೆಂದು ಭಾವವು.

ಪರಮಾಣುಗಳಿಗಿಂತ ತನ್ಮಾತ್ರಗಳು ಸೂಕ್ಷ್ಮಗಳು. ಅವುಗಳಿಗಿಂತ ಅಹಂಕಾರತತ್ತ್ವವು ಸೂಕ್ಷ್ಮ, ಅದಕ್ಕಿಂತಲೂ. ಮಹತತ್ತ್ವವೆಂಬ ಬುದ್ಧಿ ತತ್ತ್ವವು ಸೂಕ್ಷ್ಮ. ಮಹತ್ತಿಗಿಂತಲೂ, ಪ್ರಧಾನವು (ಅಲಿಂಗವು) ಸೂಕ್ಷ್ಮ ಆದುದರಿಂದ ಅದಕ್ಕಿಂತಲೂ, ಸೂಕ್ಷ್ಮವಾದದ್ದು ಮತ್ತಾವುದೂ ಇಲ್ಲ.

**ಅ|| ಸವಿತರ್ಕ, ನಿರ್ವಿತರ್ಕ, ಸವಿಚಾರ, ನಿರ್ವಿಚಾರ ಸಮಾಧಿಗಳ ಏಕವಾಕ್ಯವನ್ನು ನಿರೂಪಿಸುತ್ತಾರೆ.**

೪೬. ಸೂ|| ತಾ ಏವ ಸಬೀಜಸ್ಸಮಾಧಿಃ ||

ತಾ|| ಇದುವರೆಗೂ ಹೇಳಿದ ಸವಿತರ್ಕ, ನಿರ್ವಿತರ್ಕ, ಸವಿಚಾರ, ನಿರ್ವಿಚಾರ ಸಮಾಧಿಗಳು ನಾಲ್ಕೂ ಸಬೀಜ ಸಮಾಧಿಗಳೆನ್ನಲ್ಪಡುವುದು.

ವಿ|| **ಸಬೀಜವೆಂದರೆ**—ಆಲಂಬನವು; ಇಲ್ಲವೇ ಸಂಪ್ರಜ್ಞಾತ. ಅಂದರೆ ವಿಷಯವನ್ನು ತಾನು ಅನುಭವಿಸಿದಹಾಗೆ ತಿಳಿಯುವ ಸಮಾಧಿಗಳು ಸಬೀಜ ಸಮಾಧಿಗಳು.

ಮತ್ತು ಈ ಸಮಾಧಿಗಳಲ್ಲಿ ಆತ್ಮನಿಗೂ ಅಂತಃಕರಣಕ್ಕೂ ಭೇದ ಜ್ಞಾನವಿರದಾದ್ದರಿಂದ, ಸಬೀಜ ಸಮಾಧಿಗಳೆನ್ನಲ್ಪಟ್ಟಿತು. **ಬೀಜವೆಂದರೆ,** ಸಂಸಾರಸಂಬಂಧದ ಬೀಜವೆಂದೂ ಇರುವುದು.

**ಅ|| ನಿರ್ವಿಚಾರ ಸಮಾಧಿಯ ಪ್ರಯೋಜನವನ್ನು ಹೇಳುತ್ತಾರೆ.**

೪೭. ಸೂ|| ನಿರ್ವಿಚಾರ ವೈಶಾರದ್ಯೇಽಧ್ಯಾತ್ಮಪ್ರಸಾದಃ

ತಾ|| ನಿರ್ವಿಚಾರ ಸಮಾಧಿಯ ಅಭ್ಯಾಸಬಲದಿಂದ ಅಧ್ಯಾತ್ಮ ಪ್ರಸಾದವು (ಬುದ್ಧಿಗೆ ನಿರ್ಮಲತ್ವವು) ಹುಟ್ಟುತ್ತದೆ.

ವಿ|| ಅಂದರೆ, ಸವಿತರ್ಕಕ್ಕೆ ಫಲವು, ನಿರ್ವಿತರ್ಕ, ನಿರ್ವಿತರ್ಕಕ್ಕೆ ಫಲವು ಸವಿಚಾರ, ಸವಿಚಾರಕ್ಕೆ ಫಲವು ನಿರ್ವಿಚಾರ, ಆದ್ದರಿಂದ ನಿರ್ವಿಚಾರಕ್ಕೆ ಫಲ ಅಧ್ಯಾತ್ಮ ಪ್ರಸಾದವೆಂದು ಹೇಳಲ್ಪಟ್ಟಿದೆ.

**ಅಧ್ಯಾತ್ಮ ಪ್ರಸಾದವೆಂದರೆ**—ಲೋಕದಲ್ಲಿ ಇದುವರೆಗೂ ನಡೆದಿರುವ ಸಕಲವ್ಯಾಪಾರಗಳು ಒಂದೇಸಾರಿ ತನ್ನ ಆತ್ಮದಲ್ಲಿ ತೋರುವಿಕೆ.

**ವೈಶಾರದ್ಯವೆಂದರೆ**—ನಿರ್ಮಲತ್ವವು. ನಿರ್ಮಲತ್ವವು ಹುಟ್ಟಿದರೆ ಚಿತ್ತಕ್ಕೆ ದೃಢವಾದ ಸ್ಥಿರತ್ವವು ಹುಟ್ಟುತ್ತದೆ. ಆಗ ಆತ್ಮ ಪರಿಶುಭ್ರವಾಗಿ ರುತ್ತದೆ.

**ಅ|| ಋತಂಭರ ಪ್ರಜ್ಞಾಲಕ್ಷಣವನ್ನು ಹೇಳುತ್ತಾರೆ.**

೪೮. ಸೂ|| ಋತಮ್ಭರಾ ತತ್ರ ಪ್ರಜ್ಞಾ ||

ತಾ|| ಬುದ್ಧಿಗೆ ನಿರ್ಮಲತ್ವವು ಹುಟ್ಟಿದಮೇಲೆ ಯಾವಾಗಲೂ ವಿಕಲ್ಪವು ಹೊಂದದ ಸತ್ತ್ವದಲ್ಲಿ ಕೂಡಿದ ಪ್ರಜ್ಞೆ ಹುಟ್ಟುತ್ತದೆ.

ವಿ|| ಅಧ್ಯಾತ್ಮ ಪ್ರಸಾದದಿಂದ ಹುಟ್ಟುವ ತಿಳಿವಳಿಕೆಯೇ ಋತಮ್ಭರವು **ಋತವೆಂದರೆ** ಸತ್ಯ. ಅದನ್ನು ಭರಿಸುವುದು ಋತಮ್ಭರ. ಅಂದರೆ ಅಸತ್ಯವಿಲ್ಲದ ಪ್ರಜ್ಞೆ (ತಿಳಿವಳಿಕೆ) ಯೆಂದು ಭಾವವು.

ಅಂದರೆ—ನಿರ್ಮಲವಾದ ಬುದ್ಧಿಯಲ್ಲಿ ವಿಕಲ್ಪವಿಲ್ಲದ ನಿಜವಾದ ಪ್ರಜ್ಞಾ ವಿಶೇಷ (ಋತಮ್ಭರಾಪ್ರಜ್ಞೆ) ವಿರುವಾತನು ಅಂಥಾ ಪ್ರಜ್ಞೆಯಿಂದ ಸಮಸ್ತ ಪದಾರ್ಥಗಳ ನಿಜಸ್ವರೂಪವನ್ನು ಚೆನ್ನಾಗಿ ತಿಳಿದುಕೊಳ್ಳುವ ಶಕ್ತಿವಂತನಾಗಿ, ಯೋಗದಲ್ಲಿ ಅತ್ತ್ಯುತ್ತಮಸ್ಥಿತಿಯನ್ನು ಹೊಂದುವನು.

**ಅ|| ಋತಮ್ಭರಾ ಪ್ರಜ್ಞೆಯ ವಿಶೇಷವನ್ನು ಪ್ರಶಂಸಿಸುತ್ತಾರೆ.**

೪೯. ಸೂ|| ಶ್ರೌತಾನುಮಾನ ಪ್ರಜ್ಞಾಭ್ಯಾಂ
ಸಾಮಾನ್ಯವಿಷಯಾ ವಿಶೇಷಾರ್ಥತ್ವಾತ್ ||
(ಶ್ರುತಾನುಮಾನ ಪ್ರಜ್ಞಾಭ್ಯಾಮನ್ಯ ವಿಷಯಾ) ಎಂದು
ಪಾಠಾಂತರ.

ತಾ|| ಸಾಮಾನ್ಯವಾಗಿ ಸ್ಥೂಲವಿಷಯ ಪ್ರಜ್ಞೆಗಳಾದ ಆಗಮ ಪ್ರಮಾಣದಿಂದಲೂ, ಅನುಮಾನ ಪ್ರಮಾಣದಿಂದಲೂ, ಹುಟ್ಟುವಂಥ ಪ್ರಜ್ಞೆಗಳಿಗಿಂತಲೂ, ಋತಂಭರಾ ಪ್ರಜ್ಞೆ ಸೂಕ್ಷ್ಮ ವಿಷಯಗಳಲ್ಲಿಯೂ, ಚಿನ್ಮಾತ್ರನಾದ ಪುರುಷನಲ್ಲಿಯೂ, ಇರುವ ವಿಶೇಷಗಳನ್ನು ಗೋಚರ ಮಾಡಿಸುತ್ತದೆ; ಆದ್ದರಿಂದ ವಿಲಕ್ಷಣವಾದದ್ದು.

ವಿ|| **ಶ್ರುತವೆಂದರೆ**—ಆಗಮ (ಶಬ್ದ) ಪ್ರಮಾಣದಿಂದ ಹುಟ್ಟುವ ಜ್ಞಾನ.

**ಅನುಮಾನವೆಂದರೆ**—ತಿಳಿದಿದ್ದನ್ನು ಹಿಡುದು ಊಹಿಸುವಿಕೆ ಆಗಮ, ದಿಂದ ಸಾಮಾನ್ಯಗಳಾದ ಸ್ಥೂಲ ವಿಷಯುಗಳ ಪ್ರತ್ಯಕ್ಷವು, ಅನುಮಾನದಿಂದ ಭೂತಸೂಕ್ಷ್ಮಾದಿಗಳ ಪರೋಕ್ಷಜ್ಞಾನವು ಹುಟ್ಟುತ್ತದೆ.

ಋತಮ್ಭರಾ ಪ್ರಜ್ಞೆಯಿಂದ ಭೂತಸೂಕ್ಷ್ಮಗಳಾದ ತನ್ಮಾತ್ರಗಳ ಮತ್ತು ಅಂತಃಕರಣದ, ಚಿನ್ಮಾತ್ರನಾದ ಪುರುಷನ, ವಿಶಿಷ್ಟಸ್ವರೂಪ ಸ್ಥಿತಿಗಳು ಪ್ರತ್ಯಕ್ಷವಾಗಿಯೂ ಚೆನ್ನಾಗಿಯೂ ತಿಳಿಯುತ್ತದೆ. ಅಂದರೆ, ಸೂಕ್ಷ್ಮವಾದವುಗಳೂ, ದೂರದಲ್ಲಿರುವವೂ, ಹತ್ತಿರದಲ್ಲಿರತಕ್ಕವುಗಳೂ, ಆದ ಸಮಸ್ತ ವಸ್ತು ರೂಪಗಳು ವಿಮರ್ಶೆಯಾಗಿ ತಿಳಿಯುವುದು.

ಆದುದರಿಂದ ಶ್ರೌತಾನುಮಾನ ಪ್ರಜ್ಞೆಗಳಿಗಿಂತಲೂ ಋತಮ್ಭರಾ ಪ್ರಜ್ಞೆ ವಿಲಕ್ಷಣವಾದದ್ದು.

ಈ ಋತಮ್ಭರಾ ಪ್ರಜ್ಞೆಯನ್ನು ತಾರ್ಕಿಕರು ಯೋಗಜಪ್ರತ್ಯಕ್ಷವೆಂದು ಹೇಳುತ್ತಾರೆ. ಇದು ಯುಕ್ತ ಪ್ರತ್ಯಕ್ಷವೆಂದೂ, ಯುಂಜಾನಪ್ರತ್ಯಕ್ಷವೆಂದೂ, ಎರಡು ವಿಧಗಳು. ಯೋಗಸಿದ್ಧಿಯಾದವನು ಯುಕ್ತನು. ಯೋಗಾಭ್ಯಾಸ ಮಾಡುವನು ಯುಂಜಾನನು. ಯುಕ್ತನಿಗೆ ಬೇಕಾದಾಗ ಸಮಸ್ತ ವಸ್ತುಗಳು ಗೋಚರಿಸುತ್ತದೆ. ಯುಂಜಾನನಿಗೆ ನಿರಂತರವೂ ಸಕಲ ವಸ್ತುಗಳು ಗೋಚರಿಸುತ್ತಾಯಿರುತ್ತದೆ.

**ಅ|| ಋತಮ್ಭರಾ ಪ್ರಜ್ಞೆಯ ಫಲವನ್ನು ಹೇಳುತ್ತಾರೆ.**

೫೦. ಸೂ|| ತಜ್ಜಸಂಸ್ಕಾರೋಽನ್ಯ ಸಂಸ್ಕಾರ ಪ್ರತಿಬನ್ಧೀ ||

ತಾ|| ಋತಮ್ಭರಾ ಪ್ರಜ್ಞೆಯಿಂದ ಹುಟ್ಟಿದ ಸಂಸ್ಕಾರವು. ಇತರವಾದ ಬಹಿರ್ಮುಖಜ್ಞಾನದಿಂದ ಹುಟ್ಟಿದ ಸಂಸ್ಕಾರಗಳನ್ನು ನಿರೋಧಿಸುತ್ತದೆ.

ವಿ|| ಋತಮ್ಭರಾ ಪ್ರಜ್ಞೆ, ಬಹಿರ್ಮುಖದಿಂದ ಹುಟ್ಟಿದ ಸಂಸಾರ್ಕಗಳನ್ನೂ, ನಿರ್ವಿಚಾರ ಸಮಾಧಿಯವರೆಗೂ ಹುಟ್ಟಿದ ಸಂಸ್ಕಾರಗಳನ್ನೂ, ಕೂಡ ತಮ್ಮ ಕಾರ್ಯಗಳನ್ನು ಮಾಡಲು ಸಾಮರ್ಥ್ಯವಿಲ್ಲದೆ ಇರುವ ಹಾಗೆ ಮಾಡುವುದು. ಅಂದರೆ, ಕಾರ್ಯಕಾರಿಯಾಗದಹಾಗೆ ಮಾಡುವುದು. ತತ್ತ್ವಜ್ಞಾನ ರೂಪಗಳಾದ ಸಂಸ್ಕಾರಗಳು ಬಲವುಳ್ಳದ್ದಾದ್ದರಿಂದ ಇತರ (ಅಜ್ಞಾನದಿಂದ ಹುಟ್ಟಿದ) ಸಂಸ್ಕಾರಗಳನ್ನು ಬಾಧಿಸುತ್ತದೆ. ಆದುದರಿಂದ ಋತಮ್ಭರಾ ಪ್ರಜ್ಞೆಯನ್ನು ದೃಢವಾಗಿ ಅಭ್ಯಾಸಮಾಡಬೇಕು.

ಅ॥ ಅಸಂಪ್ರಜ್ಞಾತ ಸಮಾಧಿಯ ಲಕ್ಷಣವನ್ನು ಹೇಳುತ್ತಾರೆ.

೫೧. ಸೂ॥ ತಸ್ಯಾಪಿ ನಿರೋಧೇ ಸರ್ವನಿರೋಧಾನ್ನಿರ್ಬೀಜ ಸ್ಸಮಾಧಿಃ ॥

ತಾ॥ ಆ ಋತಮ್ಭರಾ ಪ್ರಜ್ಞೆಗೂ, ಸಂಪ್ರಜ್ಞಾತ ಸಮಾಧಿಗೂ ಕೂಡ ನಿರೋಧಹುಟ್ಟಿದರೆ, ಚಿತ್ತವೃತ್ತಿಗಳು ನಾಶಹೊಂದುತ್ತವೆ. ಆದ್ದರಿಂದ ನಿರ್ಬೀಜಸಮಾಧಿ ಹುಟ್ಟುತ್ತದೆ.

ವಿ॥ ಸಾನಂದ ಸಾಸ್ಮಿತ ಸಮಾಧಿಗಳನ್ನು ; ಋತಮ್ಭರಾ ಪ್ರಜ್ಞೆಯು ನಿಗ್ರಹಿಸುವುದರಿಂದ ಚಿತ್ತದಲ್ಲಿ ಯಾವವೃತ್ತಿಹುಟ್ಟಿದರೂ ಅದನ್ನು ಹುಟ್ಟಿಸುವುದಿಲ್ಲ. ಅಂದರೆ, ಸಮಸ್ತ ಚಿತ್ತವೃತ್ತಿಗಳನ್ನು ಸ್ವಕಾರಣವಾದ ಚಿತ್ತದಲ್ಲಿ ಲಯಿಸುತ್ತದೆ.

ಆಗ ಶುದ್ಧ ಬುದ್ಧ ಮುಕ್ತ ಸ್ವರೂಪವು, ನಿತ್ಯ ನಿರತಿಶಯ ಮಹಾ ಕೈವಲ್ಯಸ್ಥಿತಿಯಾದ ಪುರುಷನ ಸ್ವಸ್ವರೂಪಸ್ಥಿತಿ ಹುಟ್ಟುತ್ತದೆ. ಅಂದರೆ ಚಿನ್ಮಾತ್ರನಾದ ಪುರುಷನು ಸ್ವಸ್ವರೂಪದಲ್ಲಿರುವಂಥಾವನಾಗುತ್ತಾನೆ. ಇದು ಜನನ ಮರಣ ಪ್ರವಾಹರೂಪವಾದ ಘೋರಸಂಸಾರದಲ್ಲಿ ಅಂಟಿಸದೆ ಇರುತ್ತಾದ್ದರಿಂದ ನಿರ್ಬೀಜಸಮಾಧಿಯೆಂದು ಹೆಸರು.

ಪಾತಂಜಲಿ ಯೋಗಸೂತ್ರಗಳಲ್ಲಿ

ಯೋಗ ಪಾದ

ಸಮಾಪ್ತ.



# ಸಾಧನಪಾದ

ಶ್ಲೋ॥ ತೇ ತೇ ದುಷ್ಪ್ರಾಪಯೋಗಾರ್ಥಿ ಸಿದ್ಧಯೇ ಯೇನ
ದರ್ಶಿತಾ ।
ಉಪಾಯಾ ಸ್ಸಜಗನ್ನಾಥ ಸ್ತ್ರ್ಯಕ್ಷೋಽಸ್ತು ಪ್ರಾರ್ಥಿ
ತಾಪ್ತಯೇ ॥

**ಅ॥ ಕ್ರಿಯಾ ಯೋಗಸ್ವರೂಪವನ್ನು ಹೇಳುತ್ತಾರೆ.**

೧. ಸೂ॥ ತಪ ಸ್ಸ್ವಾಧ್ಯಾ ಯೇಶ್ವರ ಪ್ರಣಿಧಾನಾನಿ ಕ್ರಿಯಾ
ಯೋಗಾಃ ।

ತಾ॥ ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸುಗಳನ್ನು, ವೇದಮಂತ್ರ ಗಳ ಜಪವನ್ನು, ಫಲಾಪೇಕ್ಷೆಯಿಲ್ಲದೆ ತಾನು ಮಾಡುವ ಕರ್ಮಗಳನ್ನು ಈಶ್ವರನಿಗೆ ಅರ್ಪಿಸುವಿಕೆಯು, ಕ್ರಿಯಾ ಯೋಗಗಳೆನ್ನಲ್ಪಡುವುದು.

ವಿ॥ ಪ್ರಥಮ ಪಾದದಲ್ಲಿ ಯೋಗಸ್ವರೂಪವನ್ನು, ಯೋಗೋಪಾಯಗಳನ್ನು, ಯೋಗವಿಧಾನಗಳನ್ನು, ಸಮಾಹಿತ ಚಿತ್ತವಿರುವವನಿಗೆ ಅಥವ ಸ್ವಸ್ಥ ಚಿತ್ತವಿರುವವನಿಗೆ ಸಬೀಜ ನಿರ್ಬೀಜ ಸಮಾಧಿರೂಪವಾದ ಯೋಗವನ್ನು ಹೇಳಲ್ಪಟ್ಟಿತು. ಈಗ ಯೋಗಾಪೇಕ್ಷೆಯಿರುವ ಚಪಲಚಿತ್ತವುಳ್ಳವನಿಗೆ ಸಾಧ್ಯವು ಹೇಗೆಂದು ಆಲೋಚಿಸಿ ಯೋಗಕ್ಕೆ ಸಾಧ್ಯವಾದ ಈ ಸಾಧನ ಪಾದದಲ್ಲಿ ಕ್ರಿಯಾ ಯೋಗಗಳ ಕ್ರಮವೇ ಮೊದಲಾದುವನ್ನು ವಿವರಿಸಲ್ಪ ಡುತ್ತವೆ. ತಪಸ್ಸುಮಾಡಬೇಕಾದರೂ ಧಾತುವೈಷಮ್ಯವನ್ನು ಹುಟ್ಟಿಸಿ ಚಿತ್ತವನ್ನು ಕೆಡಿಸುವಷ್ಟು ಮಾಡಬಾರದು ಹೇಗೆಂದರೆ—ಚಿನ್ನವನ್ನು ಪುಟ ಹಾಕುವುದು ಅದರಲ್ಲಿರತಕ್ಕ ದೋಷವನ್ನು ಹೋಗಲಾಡಿಸುವುದಕ್ಕೋ ಸ್ಕರವೇ ಹೊರತು, ಚಿನ್ನವನ್ನೇ ಭಸ್ಮಮಾಡುವುದಕ್ಕಲ್ಲ. ಆದ್ದರಿಂದ ಜಾಗರೂಕತೆಯಿಂದ ತಪಸ್ಸು ಮಾಡಬೇಕು.

**ತಪವೆಂದರೆ**—ಶಾಸ್ತ್ರಾಂತರೋಪದಿಷ್ಟವಾದ ಕೃಚ್ಛ್ರ ಚಾಂದ್ರಾ ಯಣಾದಿಗಳು.

**ಸ್ವಾಧ್ಯಾಯವೆಂದರೆ**—ಪ್ರಣವಪೂರ್ವಕವಾದ ಮಂತ್ರಾನುಷ್ಠಾನ.

**ಈಶ್ವರಪ್ರಣಿಧಾನವೆಂದರೆ**—ಓಂಕಾರವಾಚ್ಯನಾದ ಈಶ್ವರನನ್ನು ಉಪಾಸನೆ ಮಾಡುವಿಕೆ (ಇದನ್ನು ೧ನೇ ಪಾದದ ೨೬-೨೭ನೇ ಸೂತ್ರಗಳಲ್ಲಿ ನೋಡಿರಿ.)

**ಅ॥ ಕ್ರಿಯಾಯೋಗದ ಪ್ರಯೋಜನವನ್ನು ಹೇಳುತ್ತಾರೆ.**

೨. ಸೂ॥ ಸಮಾಧಿ ಭಾವನಾರ್ಥಃ ಕ್ಲೇಶ ತನೂಕರಣಾರ್ಥಶ್ಚ ॥

ತಾ॥ ಮೇಲೆ ಹೇಳಿದ ಕ್ರಿಯಾಯೋಗವು ಸಮಾಧಿ ಸ್ಥಿರೀಕರಣಕ್ಕೂ, ಕ್ಲೇಶಗಳು ನಾಶವಾಗುವುದಕ್ಕೂ ಉಪಯೋಗವಾದದ್ದು.

ವಿ॥ ಈ ಕ್ರಿಯಾ ಯೋಗವು ಸಮಾಧಿಯನ್ನು ನಿಷ್ಪನ್ನಮಾಡಿ, ಅವಿದ್ಯಾದಿ ಕ್ಲೇಶಗಳನ್ನು ದೂರಮಾಡುವುದು. ಆದುದರಿಂದ ನಿರ್ಮಲಸತ್ತ್ವ ಪುರುಷಾಖ್ಯಾತಿಯು, ಚಿತ್ತೈಕಾಗ್ರತೆಯು ಹುಟ್ಟುತ್ತದೆ. ಯೋಗಾಪೇಕ್ಷೆಯುಳ್ಳ ಚಪಲ ಚಿತ್ತತೆಯುಳ್ಳವರೆಲ್ಲರೂ ಈ ಕ್ರಿಯಾ ಯೋಗವನ್ನು ಮಾಡಬೇಕು.

**ಅ॥ ಪಂಚ ಕ್ಲೇಶಗಳನ್ನು ನಿರೂಪಿಸುತ್ತಾರೆ.**

೩. ಸೂ॥ ಅವಿದ್ಯಾ ಸ್ಮಿತಾ ರಾಗ ದ್ವೇಷಾಭಿ ನಿವೇಶಾಃ ಪಞ್ಚ ಕ್ಲೇಶಾಃ ॥

ತಾ॥ ಅವಿದ್ಯ, ಅಸ್ಮಿತ, ರಾಗ, ದ್ವೇಷ, ಅಭಿನಿವೇಶವೆಂಬ ಈ ಐದು ಕ್ಲೇಶಗಳು.

ವಿ॥ **ಕ್ಲೇಶಗಳೆಂದರೆ**—ವಿಪರ್ಯಯಗಳೆಂದು, ಮಿಥ್ಯಾದೃಷ್ಟಿ ರೂಪಗಳೆಂದು ತಿಳಿಯತಕ್ಕದ್ದು (ಈ ವಿಷಯವನ್ನು ೧ನೇ ಪಾದದ ೭ನೇ ಸೂತ್ರದಲ್ಲಿ ನೋಡಿರಿ.)

ಅಜ್ಞಾನವೆಂಬುದೇ ಅವಿದ್ಯೆ; ನನಗೆ ಹುಟ್ಟಿದ್ದಲ್ಲವೇ? ಎಂಬುದು ಅಸ್ಮಿತ; ಪ್ರಪಂಚ ಸುಖಸಾಧನ ರೂಪವಾದದ್ದು ರಾಗ; ತನ್ನ ಸಂಕಲ್ಪಕ್ಕೆ ಹುಟ್ಟುವ ವಿಘ್ನಗಳನ್ನು ಹೋಗಲಾಡಿಸಿಕೊಳ್ಳುವುದಕ್ಕೆ ಹುಟ್ಟುವಂಥಾದ್ದು ದ್ವೇಷ; ಸಕಲ ಲಕ್ಷಣ ಸಂಪನ್ನತೆಯಿಂದ ಬದುಕಿರಬೇಕೆಂಬ ಆಶಾರೂಪಕವಾದಂಥಾದ್ದು ಅಭಿನಿವೇಶ; ಇವು ಯೋಗಕ್ಕೆ ವಿಘ್ನಕಾರಿಗಳು. ಸಂಸಾರವನ್ನು ವೃದ್ಧಿಮಾಡಿ; ಮತ್ತು ದುಃಖವನ್ನು ಹುಟ್ಟಿಸುತ್ತವೆ; ಆದ್ದರಿಂದ ಕ್ಲೇಶಗಳೆನ್ನಲ್ಪಟ್ಟಿತು. ಅಂದರೆ, ಬಾಧಾರೂಪಕವಾದ ಪರಿತಾಪವನ್ನು ಹುಟ್ಟಿಸುತ್ತವೆ. ಇವು ಚಿತ್ತದಲ್ಲಿ ನೆಲಸಿ ಸಂಸಾರ ಲಕ್ಷಣವಾದ ಪ್ರಾಪಂಚಿಕ ಧರ್ಮವನ್ನು ದೃಢಪಡಿಸುತ್ತವೆ.

**ಅ॥ ಅವಿದ್ಯೆಯೇ ಕ್ಲೇಶಕ್ಕೆ ಪ್ರಧಾನ ಕಾರಣವೆಂದು ಹೇಳುತ್ತಾರೆ.**

೪. ಸೂ॥ ಅವಿದ್ಯಾ ಕ್ಷೇತ್ರ ಮುತ್ತರೇಷಾ ಪ್ರಸುಪ್ತ ತನು

ವಿಚ್ಛಿನ್ನೋ ದಾರಾಣಾಮ್ ॥

ತಾ॥ ಅವಿದ್ಯಾದಿ ಕ್ಲೇಶಗಳು ಪರಸ್ಪರ ಸಮಾನವಾಗಿದ್ದರೂ, (ನಿದ್ರೋಪಶಮನ ವಿಚ್ಛಿನ್ನೋದಾರಗಳಾದರೂ,) ಕ್ಲೇಶಗಳಿಗೆ ಪ್ರಧಾನ ಕಾರಣವಾದದ್ದು ಅವಿದ್ಯೆಯೆನ್ನಲ್ಪಡುವುದು.

ವಿ॥ ನಾನು ನಾನೆಂದು ಬುದ್ಧಿಗೆ ಅಭೇದವಾಗಿ ಆತ್ಮನನ್ನು ತಿಳಿಸುವಂಥ ಅಸ್ಮಿತ ವೆಂಬ ಕ್ಲೇಶಕ್ಕೂ; ಸುಖಾನುಸ್ಮೃತಿಯಿಂದ ಆಯಾ ವಸ್ತುಗಳಲ್ಲಿ ಉಂಟಾಗುವ ಸ್ವೀಕಾರೇಚ್ಛಾರೂಪವಾದ ರಾಗಕ್ಕೂ; ದುಃಖಕರವೆಂಬ ಅನುಸ್ಮೃತಿಯಿಂದ ಆಯಾ ವಸ್ತುಗಳಲ್ಲಿ ಉಂಟಾಗುವ ಪರಿಹಾರ ಬುದ್ಧಿರೂಪವಾದ ದ್ವೇಷಕ್ಕೂ; ಮತ್ತು ಆಗಿಹೋಗುವ ಯಿಷ್ಟಭಂಗ ಮರಣಾದಿಕವನ್ನನುಸರಿಸಿ ಆಗುವಂಥ ಭಯರೂಪವಾದ ಅಭಿನಿವೇಶಕ್ಕೂ; ಆಧಾರವಾಗಿರ ತಕ್ಕದ್ದು ಅವಿದ್ಯೆಯೆನ್ನಲ್ಪಡುವುದು.

ಅಂದರೆ:—ಪ್ರಾಣಿಗಳು ಬಾಲ್ಯ ದೆಶೆಯಲ್ಲಿ ಕೆಲಸಗಳನ್ನು ಮಾಡುವುದಕ್ಕೆ ಶಕ್ತಿಸಾಲದೆ ಚಿತ್ತದಲ್ಲಿ ಮಲಗಿ ನಿದ್ದೆಹೋಗುವ ಹಾಗು, ಆ ಬಾಲ್ಯಾವಸ್ಥೆ ಹೋಗಿ ಯೌವನಾವಸ್ಥೆ ಬರುವುದಕ್ಕೆ ಪೂರ್ವಸ್ಥಿತಿಯಲ್ಲಿರತಕ್ಕ ಪ್ರಾಣಿಗಳಲ್ಲಿ ಪ್ರಜ್ಞೆಯಿರುವ, ಶರೀರಗಳುಳ್ಳ ಹಾಗು, ಯೌವನಾವಸ್ಥೆಯಲ್ಲಿ ಒಂದರಲ್ಲೊಂದು ಮಿಶ್ರವಾಗದೆ ತಮ್ಮ ತಮ್ಮ ಕೆಲಸಗಳನ್ನು ಮಾಡತಕ್ಕವುಗಳಾಗಿಯೂ, ಯೌವ್ವನಾಂತರಾವಸ್ಥೆಗಳಲ್ಲಿ ಕ್ರಮವಾಗಿ ವೃದ್ಧಿಯಾಗುವ ಉತ್ಕೃಷ್ಟದಶೆ ಯಿರತಕ್ಕವುಗಳಾಗಿ ಅಸ್ಮಿತ, ರಾಗ, ದ್ವೇಷ, ಅಭಿನಿವೇಶವೆಂಬಿವುಗಳಿಗೆ ಅವಿದ್ಯೆಯೇ ಕಾರಣ. ಹೇಂಗೆದರೆ; ಪ್ರಾಣಿಗಳ ಬಾಲ್ಯಾವಸ್ಥೆಗಳು ವೃದ್ಧಿಯಾಗಿ ಬಂದಹಾಗೆಲ್ಲ, ಅಸ್ಮಿತ, ರಾಗ, ದ್ವೇಷಾಭಿನಿವೇಶಗಳು ಆ ಅವಿದ್ಯೆಯ ಸಹಾಯ ಬಲದಿಂದಲೇ ಕ್ರಮಕ್ರಮವಾಗಿ ಬರುವುದರಿಂದ ಮಿಕ್ಕ ಕ್ಲೇಶಗಳಿಗೆ ಅವಿದ್ಯೆಯೇ ಮೂಲಕಾರಣ. ಆದುದರಿಂದ ಅವಿದ್ಯೆಯನ್ನು ಸಮ್ಯಕ್ ಜ್ಞಾನದಿಂದ ನಿವರ್ತಿಸಿದರೆ ಮಿಕ್ಕ ಕ್ಲೇಶಗಳು ಹುಟ್ಟುವುದಕ್ಕೆ ಅವಕಾಶವಿಲ್ಲದೆ ಹೋಗುವುದು.

ಮತ್ತು ಅಸಂಪ್ರಜ್ಞಾತ ಸಮಾಧಿ ನಿಷ್ಠರಲ್ಲಿ ಈ ಅವಿದ್ಯಾದಿಗಳು ದಗ್ಧ ಬೀಜಗಳ ಹಾಗೆ ನಿರ್ಮೂಲವಾಗುತ್ತವೆ. ಸಾನಂದ ಸಾಸ್ಮಿತ ಸಮಾಧಿ

ನಿಷ್ಮರಲ್ಲಿ ನಿದ್ದೆಹೋಗುತ್ತವೆ. ಸವಿಚಾರ ನಿರ್ವಿಚಾರ ನಿಷ್ಮರಲ್ಲಿ ಶರೀರ ಗಳುಳ್ಳವುಗಳಾಗಿವೆ. ಸವಿತರ್ಕ ನಿರ್ವಿತರ್ಕ ಸಮಾಧಿ ನಿಷ್ಮರಲ್ಲಿ ವಿರಳವಾಗಿ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತವೆ. ಕರ್ಮಠರಲ್ಲಿಯೂ, ಇತರ ರಲ್ಲಿಯೂ, ಉತ್ಕೃಷ್ಟ ಸ್ಥಿತಿಯಲ್ಲಿರುತ್ತವೆ. ಆದುದರಿಂದ, ಅವಿದ್ಯೆಯನ್ನು ಬಿಡುವುದಕ್ಕೆ ಪ್ರಯತ್ನಿಸಬೇಕು. ಅಸ್ಮಿತಾದಿಗಳು ನಾಲ್ಕಕ್ಕೂ ಪ್ರಸುಪ್ತಿ, ಕೃಶತ, ವಿಚ್ಛೇದ, ಔತ್ಕಟ್ಯ ಎಂದು ನಾಲ್ಕು ದೆಶೆಗಳಿವೆ. ಇವುಗಳಿಗೂ ಅವಿದ್ಯೆಯೇ ಮೂಲವು.

ವಿದೇಹ ಪ್ರಕೃತಿ ಲಯರಲ್ಲಿ ಬೀಜ ಶಕ್ತಿಯ ಜತೆಯಲ್ಲಿಯೇ ಇರುವಿಕೆ ಪ್ರಸುಪ್ತಿ; ವಿರುದ್ಧವಾಗಿ ಭಾವಿಸುವುದರಿಂದ ಬಲವು ಕಮ್ಮಿಯಾಗಿರುವಿಕೆಗೆ ಕೃಶತೆ; ಇವೆರಡು ಯೋಗಬಲದಿಂದ ಹುಟ್ಟಿದ ಅವಸ್ಥೆಗಳು. ಕ್ರೋಧವು ಹುಟ್ಟುವಾಗ ಕಾಮಕ್ಕೆ ಹುಟ್ಟುವ ಭಂಗವು ವಿಚ್ಛೇದವು; ಕಾಮಿನೀ ಸಮಾವೇಶಾದಿ ನಿಮಿತ್ತಗಳಿಂದಾಗುವ ಪ್ರಕೋಪವು ಉತ್ಕಟ; ಇವುಗಳೆಲ್ಲಕ್ಕೂ ಮಡಕೆಗೆ ಮಣ್ಣು ಪ್ರಕೃತಿಯಾದ ಹಾಗೆ, ಅವಿದ್ಯೆಯೇ ಪ್ರಕೃತಿ. ಅಂದರೆ ನಿಮಿತ್ತ ಕಾರಣವು.

ಈ ಅವಿದ್ಯೆ ತಗ್ಗುತ್ತಾ ಹೆಚ್ಚುತ್ತಾ ಉಪಚಯಾಪಚಯಗಳುಳ್ಳ ವಸ್ತುವಿನಲ್ಲಿ ತುಲ್ಯವಾಗಿರುವುದರಿಂದ ಇದು ನಾಶವಾಗುತ್ತದೆ. ಆದುದರಿಂದ ಇದನ್ನು ನಿವರ್ತಿಸುವುದಕ್ಕೆ ಆಗುತ್ತದೆಂದು ತಿಳಿಯಬೇಕು.

**ಅ|| ಅವಿದ್ಯಾ ಕ್ಲೇಶ ಸ್ವರೂಪವನ್ನು ನಿರೂಪಿಸುತ್ತಾರೆ.**

೫. ಸೂ|| ಅನಿತ್ಯಾ ಶುಚಿ ದುಃಖಾನಾತ್ಮಸು ನಿತ್ಯ ಶುಚಿ
ಸುಖಾತ್ಮ ಖ್ಯಾತಿ ರವಿದ್ಯಾ ||

ತಾ|| ಅನಿತ್ಯಗಳಾದ ವಸ್ತುಗಳಲ್ಲಿ ನಿತ್ಯತ್ವವನ್ನು, ಅಪರಿಶುದ್ಧ ಗಳಾದ ದೇಹಾದಿಗಳಲ್ಲಿ ಶುಚಿತ್ವವನ್ನು, ದುಃಖಾದಿಗಳಾದ ಪ್ರಪಂಚ ವಿಷಯಗಳಲ್ಲಿ ಸುಖತ್ವವನ್ನು, ಆತ್ಮನಲ್ಲದ ಶರೀರದಲ್ಲಿ ಆತ್ಮ ತತ್ತ್ವವನ್ನು ಭಾವಿಸುವಿಕೆ ಅವಿದ್ಯೆಯೆನ್ನಲ್ಪಡುವುದು.

ವಿ|| **ಅನಿತ್ಯವೆಂದರೆ**—ಪೃಥಿವಿ, ವಸ್ತ್ರಗಳು, ಪಾತ್ರೆಗಳು, ಆಭರಣಾದಿಗಳೇ ಮೊದಲಾದುವು.

**ಅಶುಚಿಯೆಂದರೆ**-ಕಾಮಿನೀ ದೇಹಾದಿಗಳಲ್ಲಿ ಪರಭೋಗ್ಯತಾ ರೂಪವು ಸ್ವದೇಹಾದಿಗಳು.

**ಅಸುಖತ್ವವೆಂದರೆ**—ದುಃಖಾತ್ಮವಾದ ಜನ್ಮ; ಇಲ್ಲಿವೇ ಪ್ರಾಪಂಚಿಕ ವಿಷಯ ಜ್ಞಾನ.

**ಅನಾತ್ಮನೆಂದರೆ**—ಸ್ವಶರೀರ ಪುತ್ರ ದಾರಾದಿಗಳು.

**ಅವಿದ್ಯೆಯೆಂದರೆ**—ಇಲ್ಲದ ಅಂಶೆಯನ್ನು ಇರುವ ಹಾಗೆ ತೋರಿಸುವಂಥ ಒಂದು ವಿಧವಾದ ಬುದ್ಧಿಯೇ ಹೊರತು ಅಭಾವವಾದದ್ದಲ್ಲ. ಇದು ಅನಾದಿಯಾಗಿ ಆತ್ಮನ ಕೂಡ ಅಂಟಿಕೊಂಡಿರುವ ಮತ್ತತೆ. ಇದನ್ನು ಬೇರೆಯಾಗಿರುವಂಥ ಮದದಶೆಯೆನ್ನಬಹುದು.

ಮಿಥ್ಯಾರೂಪವಾದ ಅನಿತ್ಯದಲ್ಲಿ ನಿತ್ಯ ಜ್ಞಾನವು, ಅಶುಚಿತ್ವದಲ್ಲಿ ಶುಚಿತ್ವ ಜ್ಞಾನವು, ದುಃಖಾತ್ಮಕದಲ್ಲಿ ಸುಖತ್ವಜ್ಞಾನವು, ಅನಾತ್ಮನಲ್ಲಿ ಆತ್ಮ ತತ್ವ ಜ್ಞಾನವು, ಆಗಿರುವುದಕ್ಕೆ ಕಾರಣ ಅವಿದ್ಯೆಯಾಗಿರುತ್ತದೆ. ಹೀಗೆ ಅಪುಣ್ಯ ಕಾರ್ಯಗಳಲ್ಲಿ ಪುಣ್ಯತ್ವ ಜ್ಞಾನವು, ಅನರ್ಥಗಳಲ್ಲಿ ಅರ್ಥತ್ವ ಜ್ಞಾನ ಹುಟ್ಟಿಸಿ ಸಂಸಾರವನ್ನು ವೃದ್ಧಿಮಾಡುತ್ತಾದ್ದರಿಂದ ಅವಿದ್ಯೆಯನ್ನು ದೂರ ಮಾಡಬೇಕು.

**ಅ|| ಅಸ್ಮಿತಾ ಕ್ಲೇಶ ಸ್ವರೂಪವನ್ನು ನಿರೂಪಿಸುತ್ತಾರೆ.**

೬. ಸೂ|| ದೃಗ್ದರ್ಶನ ಶಕ್ತ್ಯೋರೇಕಾತ್ಮತೈ ವಾಸ್ಮಿತಾ ||

ತಾ|| ಚಿನ್ಮಾತ್ರನಾದ ಸಾಕ್ಷಿ ಪುರುಷನು, ರಜಸ್ತಮೋಗುಣಗಳಿಲ್ಲದ ಶುದ್ಧ ಸಾತ್ವಿಕ ಪರಿಣಾಮ ರೂಪವಾದ ಅಂತಃಕರಣವು, ಇವುಗಳ ಐಕ್ಯವು ಅಸ್ಮಿತವೆಂಬ ಕ್ಲೇಶವೆನ್ನಲ್ಪಡುವುದು.

ವಿ|| ಪುರುಷನು ಅಜಡ, ಅಂತಃಕರಣವು ಜಡ, ಪುರುಷನು ಭೋಕ್ತೃವು. ಅಂತಃಕರಣವು ಭೋಗ್ಯವು, ಹೀಗೆ ಪರಸ್ಪರ ಭಿನ್ನರೂಪವಾದರೂ, ಇವುಗಳ ಭೇದವನ್ನು ತಿಳಿಯದೆ ಇರುವ ಜ್ಞಾನದಿಂದ ಹುಟ್ಟುವ ನಾನೆಂಬ ಅಭಿಮಾನವು ಅಸ್ಮಿತವೆನ್ನಲ್ಪಡುವುದು. ಚಿನ್ಮಾತ್ರನಾದ ಪುರುಷನು ದೃಕ್ಛಕ್ತಿ, ಬುದ್ಧಿ ತತ್ತ್ವ, ದರ್ಶನ ಶಕ್ತಿ; ಇವುಗಳ ಐಕ್ಯಧ್ಯಾಸವು ಅಸ್ಮಿತ.

ಅಂದರೆ-ಭೋಕ್ತೃ ಶಕ್ತಿಯಾದ ಪುರುಷ ತತ್ತ್ವಕ್ಕೂ, ಭೋಗ್ಯ ಶಕ್ತಿಯಾದ ಬುದ್ಧಿ ತತ್ತ್ವಕ್ಕೂ ಅತ್ಯಂತ ವಿಭಾಗವು, ಅತ್ಯಂತ ಸಂಕರವೂ ಆಗಿರುವಾಗ ನಾನೆಂಬ ಅಭೇದಾ ಧ್ಯಾಸದಿಂದ ಭೋಗಕಲ್ಪನವು ಹುಟ್ಟುತ್ತದೆ. ಹೀಗೆ ಹುಟ್ಟುವುದಕ್ಕೆ ಅಸ್ಮಿತವೇ ಕಾರಣ.

**ಅ|| ರಾಗ ಕ್ಲೇಶ ಲಕ್ಷಣವನ್ನು ಹೇಳುತ್ತಾರೆ.**

೭. ಸೂ|| ಸುಖಾನು ಶಯೀ ರಾಗಃ |

ತಾ|| ಪ್ರಪಂಚ ಸುಖವನ್ನು ಅನುಸರಿಸುವುದೇ ರಾಗವೆಂಬ ಕ್ಲೇಶವೆನ್ನಲ್ಪಡುತ್ತದೆ.

ವಿ|| ವಿಷಯ ಸುಖಗಳು ತಿಳಿದವನಿಗೆ, ಆ ಸುಖಗಳ ಜ್ಞಾಪಕದಿಂದ, ಅಂಥ ಸುಖಗಳಿಗೆ ಕಾರಣವಾದ ವಿಷಯಗಳಲ್ಲಿ ಅಭಿಲಾಷೆ ಹುಟ್ಟುವುದೇ ರಾಗವು. ಅಂದರೆ ಸುಖಜ್ಞನಿಗೆ ಸುಖಾನುಸ್ಮೃತಿ ಪೂರ್ವಕವಾಗಿ ಸುಖಸಾಧನದಿಂದ ಹುಟ್ಟುವ ಆಸಕ್ತಿ ರಾಗವು.

**ಅ|| ದ್ವೇಷ ಕ್ಲೇಶ ಸ್ವರೂಪವನ್ನು ಹೇಳುತ್ತಾರೆ.**

೮. ಸೂ|| ದುಃಖಾನುಶಯೀ ದ್ವೇಷಃ |

ತಾ|| ದುಃಖವನ್ನು ಅನುಸರಿಸಿರುವುದು, ದ್ವೇಷವೆಂಬ ಕ್ಲೇಶವೆನ್ನಲ್ಪಡುತ್ತದೆ.

ವಿ|| ದುಃಖಜ್ಞನಿಗೆ ದುಃಖಾನುಸ್ಮೃತಿ ಪೂರ್ವಕವಾಗಿ ದುಃಖಸಾಧನದಿಂದ ಹುಟ್ಟುವಂಥ ವೈರವೇ ದ್ವೇಷವು. ಅಂದರೆ ದುಃಖವನ್ನನುಭವಿಸಿರತಕ್ಕ ನೆನಪಿನಿಂದ, ಆ ದುಃಖಕ್ಕೆ ಹೇತುವಾದಂಥಾವುಗಳಲ್ಲಿ ಯಾವುದೂ ತನಗೆ ಆಗಕೂಡದೆಂಬ ತಿರಸ್ಕಾರ ಜ್ಞಾನಕ್ಕೆ ದ್ವೇಷವೆಂದು ಹೆಸರು.

**ಅ|| ಅಭಿನಿವೇಶ ಕ್ಲೇಶ ಲಕ್ಷಣವನ್ನು ಹೇಳುತ್ತಾರೆ.**

೯. ಸೂ|| ಸ್ವರಸವಾಹೀ ವಿದುಷೋಽಪಿ ತಥಾರೂಢೋಽಭಿನಿವೇಶಃ ||

ತಾ|| (ಪಿಪೀಲಿಕಾದಿ ಬ್ರಹ್ಮಪರ್ಯಂತರ ವಿರತಕ್ಕ ಪ್ರಾಣಿಗಳಿಗೆ ನಿಮಿತ್ತವಿಲ್ಲದೆಯೇ) ಜನ್ಮಾಂತರ ಸಂಸ್ಕಾರ ಬಲದಿಂದ ಶರೀರಕ್ಕೂ, ವಿಷಯಗಳಿಗೂ, ತನಗೂ ಅಗಲುವಿಕೆ ಹುಟ್ಟಬಾರದೆಂಬ ಭಯರೂಪವಾದ ಜ್ಞಾನಕ್ಕೆ ಅಭಿನಿವೇಶವೆಂಬ ಕ್ಲೇಶವೆನ್ನಲ್ಪಡುತ್ತದೆ.

ವಿ|| ತನಗೆ ಪೂರ್ವಜನ್ಮದಲ್ಲಿ ಹುಟ್ಟಿದ ಮರಣ ದುಃಖಾನುಭವ ವಾಸನೆಯಿಂದ ಶರೀರಕ್ಕೂ, ವಿಷಯಗಳಿಗೂ, ತನಗೂ, ವಿಯೋಗವು. ಅಥವ ಅಗಲುವಿಕೆ ಹುಟ್ಟಬಾರದೆಂಬ ಅಭಿಮಾನವನ್ನು ವಹಿಸಿರತಕ್ಕ ಭಯರೂಪವಾದ ನಿತ್ಯ ಸಂಬಂಧವು ತಿಳಿದವನಿಗೂ ಕೂಡ ಮೇಲೆ ಹೇಳಿದವುಗಳು ಗೋಚರವಾಗುತ್ತಾಯಿರುವುದೇ ಅಭಿನಿವೇಶವೆಂಬ ಕ್ಲೇಶವು.

**ಸ್ವರಸವೆಂದರೆ**—ಸ್ವಭಾವವು. ಅಂದರೆ ವಾಸನಾತ್ಮಕವಾಗಿ ಮೊದಲಿನಿಂದ ಹೋಗದೆ ವಸ್ತುಗಳನ್ನು ನೋಡುವಾಗ ಮೇಲಕ್ಕೆ ಉಕ್ಕಿಬರುವ

ಮರಣ ಭಯವು ಅಭಿನಿವೇಶವು. ಇದು ಪರೋಕ್ಷ ಜ್ಞಾನವಿರುವವನಿಗೂ, ಅಜ್ಞಾನಿಗೂ ಹುಟ್ಟುತ್ತದೆ.

**ಅ|| ಸಕಲ ಕ್ಲೇಶ ಪರಿಹಾರೋಪಾಯವನ್ನು ಹೇಳಲುದ್ದೇಶಿಸಿ ಈಗ ಸೂಕ್ಷ್ಮರೂಪ ಕ್ಲೇಶಗಳನ್ನು ತ್ಯಜಿಸುವುದಕ್ಕೆ ಉಪಾಯವನ್ನು ಹೇಳುತ್ತಾರೆ.**

೧೦. ಸೂ|| ತೇ ಪ್ರತಿ ಪ್ರಸವ ಹೇಯಾ ಸ್ಸೂಕ್ಷ್ಮಾಃ ||

ತಾ|| ಸೂಕ್ಷ್ಮರೂಪಗಳಾದ ಮೇಲೆ ಹೇಳಿದ ಕ್ಲೇಶಗಳನ್ನು ಪ್ರತಿಲೋಮ ಪರಿಣಾಮದಿಂದ ನಿರಾಕರಿಸಬೇಕು.

ವಿ|| ಸೂಕ್ಷ್ಮರೂಪಗಳಾದ ಆ ಕ್ಲೇಶಗಳನ್ನು ಕ್ರಮವಾಗಿ ಒಂದರನ್ನು ಬಿಟ್ಟ ಮೇಲೆ ಇನ್ನೊಂದರನ್ನು ಬಿಡಬೇಕು. ಅಂದರೆ, ಅಭಿನಿವೇಶವನ್ನು ಬಿಟ್ಟ ಮೇಲೆ ದ್ವೇಷವನ್ನು, ಆಮೇಲೆ ರಾಗವನ್ನು, ಅದನ್ನು ಬಿಟ್ಟಮೇಲೆ ಅಸ್ಮಿತವನ್ನು, ಅದಾದ ಮೇಲೆ ಅವಿದ್ಯೆಯನ್ನು ಬಿಡಬೇಕು. ಹೀಗೆ ಇವುಗಳನ್ನು ತಿಳಿದು ಕ್ರಮಕ್ರಮವಾಗಿ ಬಿಡುವುದರಿಂದ ಅವಿದ್ಯೆ ನಾಶವಾಗುತ್ತದೆ. ನಾಶವಾದ ಮೇಲೆ ಮರಳಿ ಹುಟ್ಟುವುದಿಲ್ಲ.

**ಅ|| ಸ್ಥೂಲ ರೂಪಗಳಾದ ಕ್ಲೇಶಗಳನ್ನು ನಿವೃತ್ತಿ ಮಾಡುವುದಕ್ಕೆ ಉಪಾಯವನ್ನು ಬೋಧಿಸುತ್ತಾರೆ.**

೧೧. ಸೂ|| ಧ್ಯಾನ ಹೇಯಾ ಸ್ತದ್ವೃತ್ತಯಃ ||

ತಾ|| ತಮ್ಮ ಕಾರ್ಯಗಳನ್ನು ಮಾಡುವುದಕ್ಕೆ ಪ್ರಾರಂಭಿಸಿದ ಆ ಕ್ಲೇಶಗಳ ಸುಖದುಃಖ ರೂಪಗಳಾದ ವೃತ್ತಿಗಳನ್ನು ಚಿತ್ತೈಕಾಗ್ರತೆಯಿಂಪ ನಿವೃತ್ತಿ ಮಾಡಬೇಕು.

ವಿ|| ಸುಖ ದುಃಖ ಮೋಹ ರೂಪಗಳಾದ ಕ್ಲೇಶವೃತ್ತಿಗಳನ್ನು ಚಿತ್ತೈಕಾಗ್ರತೆಯಿಂದ ತ್ಯಜಿಸಬೇಕು. ಸ್ಥೂಲಗಳಾದ ವೃತ್ತಿಗಳು ಚಿತ್ತ ಪರಿಕರ್ಮಗಳಾದ ಮೈತ್ರಿ, ಕರುಣ, ಮುದಿತಾದಿಗಳಿಂದ ನಿವರ್ತಿಸುತ್ತದೆ.

ಹೇಗೆಂದರೆ—ಮೈಲಿಗೆಯಿಂದ ಕೂಡಿದ ವಸ್ತ್ರವನ್ನು ನೀರಿನಲ್ಲಿ ಒಗೆದ ಮಾತ್ರದಿಂದ ಯಾವ ರೀತಿಯಾಗಿ ಮಲಿನವು ಹೋಗುತ್ತದೆಯೋ, ಅದೇರೀತಿಯೆಂದು ಭಾವವು. ಮತ್ತು ಆ ವಸ್ತ್ರದಲ್ಲಿ ಕರೆ ಮೊದಲಾದುವುಗಳನ್ನು ಚೌಳು ನೀರಿನಲ್ಲಿ ಬೇಯಿಸುವುದರಿಂದಲೂ, ಬಿಸಿಲಿನಲ್ಲಿ ಹಾಕುವುದರಿಂದಲೂ ಯಾವ ರೀತಿಯಾಗಿ ಸ್ವಚ್ಛವಾಗುತ್ತದೆಯೋ, ಅದೇ ರೀತಿಯಾಗಿ ಕ್ಲೇಶ ವೃತ್ತಿಗಳು ಅವುಗಳಿಗೆ ವಿರೋಧಗಳಾದ ಕರ್ಮಾನುಷ್ಠಾನಗಳಿಂದ ನಾಶವಾಗುತ್ತವೆ.

**ಅ॥ ಕರ್ಮಕ್ಕೂ ಕರ್ಮ ಫಲಕ್ಕೂ ಕಾರಣವಾದ ಕ್ಲೇಶ ರೂಪವನ್ನು ಹೇಳುತ್ತಾರೆ.**

## ೧೨. ಸೂ॥ ಕ್ಲೇಶ ಮೂಲಃ ಕರ್ಮಾಶಯೋ ದೃಷ್ಟಾ ದೃಷ್ಟ ಜನ್ಮ ವೇದನೀಯಃ ॥

ತಾ॥ ಪುಣ್ಯ ಪಾಪ ಮಿಶ್ರ ಕರ್ಮಗಳಿಗೆ ಮೂಲಕಾರಣವಾದದ್ದು ದುಃಖರೂಪವಾದ ಕ್ಲೇಶಗಳು. ಇಂಥ ವಾಸನಾ ರೂಪವಾದ ಕರ್ಮಗಳು ಈ ಜನ್ಮದಲ್ಲಿಯೂ, ಜನ್ಮಾಂತರದಲ್ಲಿಯೂ, ಅನುಭವಿಸಲ್ಪಡಬೇಕಾಗುತ್ತವೆ.

ವಿ॥ ದುಃಖಕ್ಕೆ ಹೇತುವು, ಕ್ಲೇಶಗಳಿಗೆ ಕಾರಣವಾಗಿರುವ ಪುಣ್ಯ ಪಾಪ ಮಿಶ್ರ ಕರ್ಮಗಳ ಸಂಸ್ಕಾರವು ಅವುಗಳ ಫಲವು, ಈ ಜನ್ಮದಲ್ಲಿಯೂ, ಜನ್ಮಾಂತರದಲ್ಲಿಯೂ, ಅನುಭವಿಸಲ್ಪಡಬೇಕಾಗುತ್ತವೆ. ವಾಸನಾರೂಪಗಳಾದ ಈ ಪುಣ್ಯ ಪಾಪ ಮಿಶ್ರಕರ್ಮಗಳ ಪ್ರಬಲ ದುರ್ಬಲಾನುಗುಣ್ಯವಾಗಿ ಪೂರ್ವ ಜನ್ಮದಲ್ಲಿ ಅನುಭವಿಸಲ್ಪಡಬೇಕಾದ್ದು ಕೂಡ ಈ ಜನ್ಮದಲ್ಲಿಯೇ ಅನುಭವಿಸಲ್ಪಡಬೇಕಾಗುತ್ತದೆ.

ಹೇಗೆಂದರೆ—ನಂದಿಕೇಶ್ವರನು ಬಾಲ್ಯದಲ್ಲಿಯೇ ಬಹಳ ಜಾಗ್ರತೆಯಾಗಿ ಮಹಾ ಪುಣ್ಯ ಫಲವು ಕೊಡತಕ್ಕ ಪಶುಪತಿ ಪೂಜೆಯೆಂಬ ಕರ್ಮದಿಂದ ಆ ಜನ್ಮದಲ್ಲಿಯೇ ದೇವತ್ವವನ್ನು, ಸಂಪೂರ್ಣಾಯುಸ್ಸನ್ನು, ದಿವ್ಯ ಭೋಗಗಳನ್ನು ಹೊಂದಿದನು. ಧ್ರುವ ಪ್ರಹ್ಲಾದಾದಿಗಳ ಚರಿತ್ರೆಗಳು ವಿಸ್ಪಷ್ಟವೇ. ವಿಶ್ವಾಮಿತ್ರನು ಪುಣ್ಯಕರ್ಮೋತ್ಕೃಷ್ಟತ್ವದಿಂದ ಕ್ಷತ್ರಿಯ ವರ್ಣವನ್ನು ಬಿಟ್ಟು ಬ್ರಾಹ್ಮಣನಾದನು.

ನಹುಷನು ಅತ್ಯಂತ ಪಾತಕಗಳನ್ನು ಮಾಡಿದುದರಿಂದ ಆ ಜನ್ಮದಲ್ಲಿಯೇ ಸರ್ಪ ಜನ್ಮವನ್ನು ಹೊಂದಿದನು.

ಊರ್ವಸಿ, ಕುಮಾರ ವನದಲ್ಲಿ ಲತಾ ರೂಪವನ್ನು ಹೊಂದಿದಳು.

ಸೌಭರಿ, ಕರ್ಮ ವೈಚಿತ್ರ್ಯದಿಂದ ಆ ಜನ್ಮದಲ್ಲಿಯೇ ಅನೇಕ ಶರೀರಗಳನ್ನು ಹೊಂದಿದನು.

ಈ ಪ್ರಕಾರವಾಗಿ ಪುಣ್ಯ ಪಾಪ ಮಿಶ್ರ ಕರ್ಮಗಳ ಬಲಕ್ಕೆ ತಕ್ಕಂಥ ಆ ಸಂಸ್ಕಾರ ಫಲಗಳನ್ನು ಈ ಜನ್ಮದಲ್ಲಿಯೂ, ಜನ್ಮಾಂತರದಲ್ಲಿಯೂ, ಅನುಭವಿಸಲ್ಪಡಬೇಕಾಗುತ್ತದೆ.

**ಅ|| ಕರ್ಮ ವಾಸನಾ ಫಲವನ್ನು ನಿರೂಪಿಸುತ್ತಾರೆ.**

೧೩. ಸೂ|| ಸತಿಮೂಲೇ ತದ್ವಿಪಾಕೋ ಜಾತ್ಯಾಯುರ್ಭೋಗಾಃ |

ತಾ|| ಅನಾದಿಕಾಲ ಸಂಚಿತ ಪಾಪ ಕರ್ಮದಿಂದ ಜಾತಿ, ಆಯುಸ್ಸು, ಭೋಗವು, ಎಂಬಿವುಗಳೇರ್ಪಡುತ್ತವೆ.

ವಿ|| ಅವಿದ್ಯಾದಿ ಕ್ಲೇಶಗಳು ನಶಿಸುವ ವರೆಗೂ, ಆ ಪುಣ್ಯ ಪಾಪ ಮಿಶ್ರ ಕರ್ಮಗಳ ಪರಿಪಾಕ ಫಲವಾದ ಜಾತಿ, ಅಥವ ಜನ್ಮವು, ಚಿರಕಾಲ ಜೀವಿತವು, ಸುಖ ದುಃಖಗಳಿಗೆ ಕಾರಣವಾದ ಇಂದ್ರಿಯ ವಿಷಯಗಳು ಹುಟ್ಟುತ್ತವೆ.

ಇಂದ್ರಿಯ ವಿಷಯಗಳು ಗಂಧಾದಿಗಳೆಂದು, ಜಾತಿ ಅಥವ ಜನ್ಮದ ಆಯುಸ್ಸು. ಆಯಾ ಪ್ರಾಣಿಗೆ ನಿರ್ಣಿತವಾಗಿರುವ ಕಾಲದವರೆಗೆಂದು ತಿಳಿಯಬೇಕು.

**ಅ|| ಕರ್ಮ ಪರಿಪಾಕವಾದ ಪುಣ್ಯ ಪಾಪ ಫಲವನ್ನು ಹೇಳುತ್ತಾರೆ.**

೧೪. ಸೂ|| ತೇ ಹ್ಲಾದ ಪರಿತಾಪ ಫಲಾಃ ಪುಣ್ಯಾಪುಣ್ಯ ಹೇತುತ್ವಾತ್ ||

ತಾ|| ಪುಣ್ಯ ಪಾಪ ಕರ್ಮಗಳ ಹೇತುವಿನಿಂದ ಸುಖದುಃಖಗಳು ಆಗುತ್ತವೆ.

ವಿ|| ಪುಣ್ಯ ಪಾಪ ಕರ್ಮ ಪರಿಪಾಕದಿಂದ ಆಗುವ ಜಾತ್ಯಾಯುರ್ಭೋಗಗಳು ಸಂತೋಷಕ್ಕೂ, ಪಾಪ ಕರ್ಮ ಪರಿಪಾಕದಿಂದಾಗುವ ಜಾತ್ಯಾಯುರ್ಭೋಗಗಳು ದುಃಖಗಳಿಗೆ ಕಾರಣವಾಗಿರುತ್ತವೆ.

ಸುಖ ದುಃಖಾದಿಗಳನ್ನು ಹುಟ್ಟಿಸುವ ಕರ್ಮವು, ಕಾಯಿಕ, ವಾಚಿಕ, ಮಾನಸಿಕ ಭೇದದಿಂದ ನಿರಂತರವು ಜರುಗುತ್ತಿರುವ ಕಾರಣ, ಅನೇಕ ಜನ್ಮಗಳು ಆಗುತ್ತಾ ಇರುತ್ತವೆ. ಈ ಕರ್ಮವು ಜನ್ಮ ಜನ್ಮದಲ್ಲಿ ವೃದ್ಧಿಯಾಗುತ್ತಾ ಇರುತ್ತದೆ.

**ಅ|| ಕರ್ಮಫಲಗಳು ಯೋಗಿಗಳಿಗೆ ದುಃಖರೂಪವಾಗಿದೆಯೆಂದು ಹೇಳುತ್ತಾರೆ.**

೧೫. ಸೂ|| ಪರಿಣಾಮ ತಾಪ ಸಂಸ್ಕಾರ ದುಃಖೈರ್ಗುಣ ವೃತ್ತಿ ವಿರೋಧಾಚ್ಚ ದುಃಖಮೇವ ಸರ್ವಂ ವಿವೇಕಿನಃ ||

ತಾ|| ವಿವೇಕಿಗಳಿಗೆ ಅಥವ ಯೋಗಿಗಳಿಗೆ ಕರ್ಮದಿಂದಾಗುವ ಸುಖದುಃಖಾದಿಗಳೆಲ್ಲವೂ ದುಃಖರೂಪವಾಗಿಯೇ ಇರುತ್ತದೆ.

ವಿ॥ ಸುಖಗಳನ್ನು ಅನುಭವಿಸುವುದರಲ್ಲಿರತಕ್ಕ ಗುಣವೃತ್ತಿ ದುಃಖರೂಪವೇ ಆದ್ದರಿಂದ, ವಿವೇಕಿಗಳಿಗೆ ಸರ್ವವೂ ದುಃಖವೇ ಆಗಿರುತ್ತದೆ. ಮತ್ತು ಕ್ಲೇಶಾದಿಗಳನ್ನು ತಿಳಿದ ವಿವೇಕಿ ಅಥವ ಯೋಗಿಗೆ ಭೋಗಸಾಧನವಾದ ಸಕಲವೂ, ವಿಷಮಿಶ್ರವಾದ ಅಮೃತದ ಹಾಗೆ ದುಃಖರೂಪವಾಗಿಯೇ ಇರುತ್ತದೆ.

ಈ ದುಃಖವು ಪರಿಣಾಮ ದುಃಖವೆಂದೂ, ತಾಪ ದುಃಖವೆಂದೂ, ಸಂಸ್ಕಾರ ದುಃಖವೆಂದೂ, ಮೂರು ವಿಧಗಳಾಗಿ ಹೇಳಲ್ಪಟ್ಟಿವೆ.

**ಪರಿಣಾಮ ದುಃಖವೆಂದರೆ**—ತಾನು ಅನುಭವಿಸುವುದು ಮುಗಿಯುವುದರಿಂದ ಮತ್ತೆ ಅದನ್ನು ಸಂಪಾದಿಸಬೇಕೆಂಬ ದುಃಖವು.

**ತಾಪಸ ದುಃಖವೆಂದರೆ**—ತಾನು ಅನುಭವಿಸುವ ವಿಷಯಕ್ಕೆ ವಿರೋಧಿಯಾದದ್ದು ಹೋಗಲಿಲ್ಲವೇ ಎಂಬ ದುಃಖವು.

**ಸಂಸ್ಕಾರ ದುಃಖವೆಂದರೆ**—ತನಗಿಷ್ಟವಾದ ಪದಾರ್ಥದಲ್ಲಿ ಅಯಿಷ್ಟವಾದ ಪದಾರ್ಥವಿರುವುದರಿಂದಾಗುವ ದುಃಖವು.

ಆದುದರಿಂದ ಸತ್ತ್ವಾದಿ ಗುಣಗಳಿಂದಾಗುವ ಸುಖದುಃಖ ಮೋಹರೂಪವಾದ ವೃತ್ತಿಗಳನ್ನು ಭಾವಿಸುತ್ತಾ, ಭಾವಿಸಲ್ಪಡತಕ್ಕದ್ದೆಂದೂ, ಎಂಬೀ ಭೇದಗಳಿಂದ ಪರಸ್ಪರ ವಿರೋಧವುಂಟಾಗುತ್ತದೆ. ವಿವೇಕಿಯಾದವನು ದುಃಖ ರೂಪಕವಾದವುಗಳೆಲ್ಲವನ್ನೂ ತ್ಯಜಿಸಬೇಕು.

**ಅ॥ ಯೋಗಿ ಕ್ಲೇಶ ಕರ್ಮಾದಿಗಳನ್ನು ತ್ಯಜಿಸದೆ ಮೋಕ್ಷವನ್ನು ಹೊಂದಲಾರನೆಂದು ಹೇಳುವುದಕ್ಕೆ ಉದ್ದೇಶಿಸಿ, ಬರತಕ್ಕ ದುಃಖವನ್ನು ತ್ಯಜಿಸಬೇಕೆಂದು ಹೇಳುತ್ತಾರೆ.**

೧೬. ಸೂ॥ ಹೇಯಂ ದುಃಖ ಮನಾಗತಮ್ ।

ತಾ॥ ಮತ್ತು ಬರತಕ್ಕ (ಅನಾಗತ) ದುಃಖವನ್ನು ಬಿಡಬೇಕು.

ವಿ॥ ಇದುವರೆವಿಗೂ ಅನುಭವಿಸಿದ ದುಃಖಗಳು ಕಳೆದುಹೋಗಿರುವುದರಿಂದಲೂ, ಈಗ ಅನುಭವಿಸುತ್ತಿರುವ ದುಃಖಗಳನ್ನು ಬಿಡುವುದಕ್ಕೆ ಶಕ್ಯವಿಲ್ಲದ್ದರಿಂದಲೂ, ಬರತಕ್ಕ ಸಂಸಾರ ದುಃಖವನ್ನು ತ್ಯಜಿಸಬೇಕು.

**ಅ॥ ದುಃಖ ಕಾರಣವನ್ನು ಹೇಳುತ್ತಾರೆ.**

೧೭. ಸೂ॥ ದೃಗ್ದೃಶ್ಯಯೋಸ್ಸಂಯೋಗೋ ಹೇಯ ಹೇತುಃ ॥
(ದ್ರಷ್ಟು ದೃಶ್ಯಯೋಃ) ಎಂದು ಪಾಠಾಂತರವು.

ತಾ॥ ದೃಗ್ದೃಶ್ಯಗಳ ಸಂಯೋಗವೇ ದುಃಖಕ್ಕೆ ಕಾರಣ.

ವಿ॥ ಚಿನ್ಮಾತ್ರನಾದ ಪುರುಷನಿಗೂ, ಬುದ್ಧಿ ತತ್ತ್ವಕ್ಕೂ, ಅಜ್ಞಾನ ಮೂಲಕವಾಗಿ ಹುಟ್ಟಿದ ಸಂಬಂಧವು ಗುಣ ಪರಿಣಾಮರೂಪವಾದ ದುಃಖಕ್ಕೆ ಕಾರಣವಾಗಿದೆ.

ಚಿನ್ಮಾತ್ರನಾದ ಅಥವ ಸಾಕ್ಷಿಭೂತನಾದ ಪುರುಷನು ದ್ರಷ್ಟ. ಆತ್ಮನೆಂದೂ ಹೇಳಬಹುದು. ಬುದ್ಧಿ ದೃಶ್ಯವು.

**ದೃಶ್ಯವೆಂದರೆ**—ನೋಡಲ್ಪಡುವುದು.

**ದ್ರಷ್ಟವೆಂದರೆ**—ನೋಡುವುದು.

ಅಂದರೆ, ಬುದ್ಧಿ ಆತ್ಮಗಳ ಸಂಯೋಗವು ಸಂಸ್ಕಾರಕ್ಕೂ, ದುಃಖಕ್ಕೂ ಕಾರಣವು.

**ಅ॥ ದೃಶ್ಯ ಸ್ವರೂಪವನ್ನು, ಅದರ ಕಾರ್ಯವನ್ನು ಅದರ ಪ್ರಯೋಜನವನ್ನು ನಿರೂಪಿಸುತ್ತಾರೆ.**

೧೮. ಸೂ॥ ಪ್ರಕಾಶ ಕ್ರಿಯಾ ಸ್ಥಿತಿ ಶೀಲಂ ಭೂತೇಂದ್ರಿಯಾತ್ಮಕಂ ಭೋಗಾಪವರ್ಗಾರ್ಥಂ ದೃಶ್ಯಮ್ ॥

ತಾ॥ ಪ್ರಕಾಶವು, ಪ್ರವೃತ್ತಿ ಸ್ಥಿತಿ, ಇವುಗಳೇ ಸ್ವರೂಪವಾಗಿರುವಂಥಾದ್ದು ; ಪೃಥಿವ್ಯಾದಿ ಪಂಚಭೂತಗಳೂ, ಗಂಧ ತನ್ಮಾತ್ರಾದಿ ಸೂಕ್ಷ್ಮ ಭೂತಗಳೂ, ಶ್ರೋತ್ರಾದಿ ಜ್ಞಾನೇಂದ್ರಿಯಗಳೂ; ವಾಗಾದಿ ಕರ್ಮೇಂದ್ರಿಯಗಳೂ ; ಬುದ್ಧ್ಯಾದಿ ಅಂತಃಕರಣಗಳೂ ; ಮತ್ತು ಈ ರೂಪಕವಾದ ಕಾರ್ಯ ರೂಪವಾದದ್ದೂ ; ಭೋಗ ಮೋಕ್ಷಗಳು ಪ್ರಯೋಜನವಾಗಿರತಕ್ಕದ್ದೂ ; ಇವುಗಳೆಲ್ಲವೂ ದೃಶ್ಯವೆನ್ನಲ್ಪಡುವುದು.

ವಿ॥ ಹೇಗೆಂದರೆ, ಈ ದೃಶ್ಯವು ಆತ್ಮನಿಂದ ಚೇತನ ಜ್ಞಾನಗಳನ್ನು ಹೊಂದತಕ್ಕ ಪ್ರಕಾಶರೂಪವಾದ ಸಾತ್ವಿಕವನ್ನು, ಪ್ರವೃತ್ತಿರೂಪಕವಾದ ಕರ್ಮವನ್ನು ಮಾಡುವಂಥ ರಾಜಸವನ್ನು, ನಿಯಮ ರೂಪಕವಾದ ಸ್ಥಿತಿಯಿರತಕ್ಕ ತಾಮಸವನ್ನು ಹುಟ್ಟಿಸುವುದಾಗಿರುತ್ತದೆ.

**ಅ॥ ದೃಶ್ಯಾವಸ್ಥಾ ಭೇದಗಳನ್ನು ಅದರ ಪ್ರಯೋಜನವನ್ನು ಹೇಳುತ್ತಾರೆ.**

೧೯. ಸೂ॥ ವಿಶೇಷಾವಿಶೇಷ ಲಿಙ್ಗಮಾತ್ರಾ ಲಿಙ್ಗಾನಿ ಗುಣಪರ್ವಾಣಿ ॥

ತಾ|| ಮಹಾ ಭೂತಗಳು, ಇಂದ್ರಿಯಗಳು, ವಿಶೇಷ ಲಿಂಗಗಳು, ತನ್ಮಾತ್ರೆಗಳು, ಅಂತಃಕರಣವು, ಅವಿಶೇಷ ಲಿಂಗಗಳು, ಬುದ್ಧಿಲಿಂಗ ಮಾತ್ರವು, ಪ್ರಧಾನವು ಅಲಿಂಗವು, ಇವು ಸತ್ವಾದಿ ಗುಣಗಳ ಅವಸ್ಥೆಗಳು.

ವಿ|| ಸತ್ತ್ವ ರಜಸ್ತಮೋಗುಣಗಳ ಅವಸ್ಥಾ ವಿಶೇಷಗಳು ನಾಲ್ಕು ವಿಧ. ಇವೆಲ್ಲವು ಪ್ರಧಾನ ತತ್ತ್ವವಾದ ಅವ್ಯಕ್ತದಲ್ಲಿ ಸೇರಿವೆ. ಆದುದರಿಂದ ಈ ನಾಲ್ಕು ಭೇದಗಳನ್ನು ತಿಳಿದುಕೊಳ್ಳುವಿಕೆ ಯೋಗಕ್ಕೆ ಪ್ರಯೋಜನಕರವಾದದ್ದು.

(೧ನೇ ಪಾದದ ೪೫ನೇ ಸೂತ್ರವನ್ನು ನೋಡಿರಿ.)

**ಅ|| ಚಿನ್ಮಾತ್ರ ಸ್ವರೂಪವನ್ನು ನಿರೂಪಿಸುತ್ತಾರೆ.**

೨೦. ಸೂ|| ದ್ರಷ್ಟಾ ದೃಶಿಮಾತ್ರ ಶ್ಶುದ್ಧೋಽಪಿ ಪ್ರತ್ಯಯಾನು ಪಶ್ಯಃ ||

ತಾ|| ಪುರುಷನು ಚಿನ್ಮಾತ್ರನು, ಪರಿಣಾಮಾದ್ಯವಸ್ಥೆಗಳಿಲ್ಲದೆ ಇರುವವನಾದರೂ, ವಿಷಯಗಳನ್ನು ಗ್ರಹಿಸುವ ಬುದ್ಧಿಯನ್ನನುಸರಿಸಿರುವುದರಿಂದ ನೋಡುವವನಾಗಿದ್ದಾನೆಂದು ವ್ಯವಹರಿಸಲ್ಪಡುತ್ತಾನೆ.

ವಿ|| ಪುರುಷನು (ದ್ರಷ್ಟ) ಸಾಕ್ಷಿರೂಪನಾದ ಚೇತನ ಮಾತ್ರನೇ. ಆದರೂ, ವಿಷಯ ವೈಲಕ್ಷ್ಯವನ್ನು ಪರಿಗ್ರಹಿಸತಕ್ಕ ಜ್ಞಾನವು ಅಂಟಿರುವುದಕ್ಕೋಸ್ಕರ ದ್ರಷ್ಟ ಅಥವ ಸಾಕ್ಷಿ ಎಂದು ವ್ಯವಹರಿಸಲ್ಪಡುತ್ತಾನೆ.

ಪುರುಷನು ವಿಷಯೋಪರಕ್ತಿಯಾದ ಬುದ್ಧಿಗೆ ಅತಿ ಸಮೀಪದಲ್ಲಿರುವವನಾದ್ದರಿಂದ ಬುದ್ಧಿಗೆ ಅನುಭವವಾದ ಸಕಲ ದುಃಖಾದಿಗಳನ್ನು ತಾನು ಅನುಭವಿಸುವವನೆಂದು ವ್ಯವಹಾರದಲ್ಲಿ ಸಂಬಂಧಿಸಿದವನಾಗುತ್ತಾನೆ. ಆದರೂ ಈ ಪುರುಷನು ತ್ರಿಕಾಲಾಬಾಧ್ಯದವನೆಂದೂ, ಆತ್ಮನೆಂದೂ ಹೇಳಲ್ಪಡುತ್ತಾನೆ.

**ಅ|| ಚಿನ್ಮಾತ್ರನೇ ಭೋಕ್ತೃನೆಂದು ಹೇಳುತ್ತಾರೆ.**

೨೧. ಸೂ|| ತದರ್ಥ ಏವ ದೃಶ್ಯ ಸ್ಯಾತ್ಮಾ ||

ತಾ|| ಆ ದೃಶ್ಯದ ಪ್ರಯತ್ನರೂಪವಾದ ಸ್ವರೂಪವು ಆ ಪುರುಷನ ಪ್ರಯೋಜನವಾಗಿದೆ.

ವಿ|| ದೃಶ್ಯಕ್ಕೆ ಪುರುಷನ ಶಕ್ತಿಯಲ್ಲದೆ ಬೇರೆ ಶಕ್ತಿಯಿಲ್ಲವಾದ್ದರಿಂದ, ಆತ್ಮನು ಚೈತನ್ಯವನ್ನು ಹೊಂದಿ ಪುರುಷನಿಗೆ ಭೋಗ್ಯವಾದ ಈ ದೃಶ್ಯದ ಸ್ವರೂಪವು,

ಪ್ರಯತ್ನವು, ಆ ಪುರುಷನದೇ ಆದುದ್ದರಿಂದ ಅನುಭೋಕ್ತೃನು ಪುರುಷನೇ ಆಗುತ್ತಾನೆ.

ಹೇಗೆಂದರೆ—ನಿಶ್ಚಯವಾಗಿ ಆತ್ಮನಿಗೆ ದೇಹದಲ್ಲಿ ಯಾವವಿಧವಾದ ಭೋಗಾನುಭವವು (ಲೋಕಾನುಭವವು) ಇಲ್ಲದಿದ್ದರೂ, ಆತ್ಮಚೈತನ್ಯವನ್ನು ಹೊಂದಿರತಕ್ಕ ಕರಣೇಂದ್ರಿಯಾದಿಗಳ ವ್ಯಾಪಾರಗಳೆಲ್ಲವೂ ಆತ್ಮಾರ್ಥವಾಗಿ ಹೇಗಿದೆಯೋ, ಹಾಗೆ ಪುರುಷನ ಚೈತನ್ಯವನ್ನು ಹೊಂದಿ ಸೃಷ್ಟ್ಯಾದಿ ನಾನಾಕಾರ್ಯಗಳನ್ನು ಮಾಡಿ ನಿರ್ವಹಿಸಿರತಕ್ಕ ಮುಖ್ಯವಾದ ಕೆಲಸಗಳೆಲ್ಲವನ್ನು, ಆ ಪುರುಷನಿಗೋಸ್ಕರ ಭೋಗವನ್ನು ಸಂಪಾದಿಸಿಕೊಡುತ್ತೇನೆಂಬ ಭಾವವಿರುವುದರಿಂದ ಆ ಭೋಗಗಳನ್ನು ಅನುಭವಿಸುವಾತನು ಆ ಪುರುಷನೇ ಆಗಿರುತ್ತಾನೆ. ಆದುದರಿಂದ, ಆ ಪುರುಷನಿಗೋಸ್ಕರ ಪ್ರಧಾನವು ಪ್ರವರ್ತಿಸುತ್ತದೆ. ಅಂದರೆ ಆ ಪುರುಷನೇ ಅನುಭೋಕ್ತೃನೆಂದು ಭಾವವು.

**ಅ|| ಬಂಧವಿರುವವರೆಗೂ ಸಂಸಾರವಿರುತ್ತದೆಂದು ಹೇಳುತ್ತಾರೆ.**

೨೨. ಸೂ|| ಕೃತಾರ್ಥಂ ಪ್ರತಿನಷ್ಟಮ ಪ್ಯನಷ್ಟ ತದನ್ಯ
ಸಾಧಾರಣತ್ವಾತ್ ||

ತಾ|| ದೃಶ್ಯವಾದ ಪ್ರಧಾನವು ವಿವೇಕವುಳ್ಳವನಿಗೆ ನಷ್ಟವಾದರೂ, ಇತರರಿಗೆ ಭೋಗಕ್ಕೆ ಸಾಧಕವಾದುದರಿಂದ ಸಾಧಾರಣವಾಗಿ ಎಲ್ಲರೂ ಬಂಧರಹಿತರು ಆಗುವುದಿಲ್ಲ.

ವಿ|| ವಿವೇಕಜ್ಞಾನದಿಂದ ಕೃತಾರ್ಥನಾದವನಿಗೆ (ಯೋಗಿಗೆ) ಮಾತ್ರ ದೃಶ್ಯವು ವ್ಯಾಪಾರ ಶೂನ್ಯವಾಗಿರುವುದು. ಮಿಕ್ಕ ಅಜ್ಞಾನಿಗಳೆಲ್ಲರಿಗೂ ದೃಶ್ಯವು ಮಿಕ್ಕಿರುತ್ತದೆ; ಆದುದರಿಂದ ಬಂಧದಲ್ಲಿ ಸಿಕ್ಕಿಕೊಂಡಿರತಕ್ಕವರಾಗುತ್ತಾರೆ. ಅಂದರೆ, ಪ್ರಪಂಚರೂಪವಾದ ಸಂಸಾರವು ನಾಶವಾಗಲಾರದು.

**ಅ|| ಸಂಯೋಗ ಸ್ವರೂಪವನ್ನು ನಿರೂಪಿಸುತ್ತಾರೆ.**

೨೩. ಸೂ|| ಸ್ವಸ್ವಾಮಿ ಶಕ್ತ್ಯೋಃಸ್ವರೂಪೋಪಲಬ್ಧಿಸ್ಸಂ
ಯೋಗಃ ||

ತಾ|| ಸ್ವಶಕ್ತಿ, ಸ್ವಾಮಿಶಕ್ತಿಗಳ (ನೋಡತಕ್ಕದ್ದು, ನೋಡುವುದು) ಸ್ವರೂಪಸಾಕ್ಷಾತ್ಕಾರಕ್ಕೆ ಸಂಯೋಗವೇ ಕಾರಣವು.

ವಿ|| ಸ್ವಶಕ್ತಿ ನೋಡುವಂಥ ಸ್ವಭಾವವು. ಅಂದರೆ ಭೋಗ್ಯತ್ವವು. ಸ್ವಾಮಿ ಶಕ್ತಿ ನೋಡುವಂಥ ಸ್ವಭಾವವು. ಅಂದರೆ ಭೋಕ್ತೃತ್ವವು. ದೃಶ್ಯಕ್ಕೆ

ಭೋಗ್ಯತ್ವವು, ಪುರುಷನಿಗೆ ಭೋಕ್ತೃತ್ವವು ಅನಾದಿಸಿದ್ಧವಾಗಿರುವುದರಿಂದ ಭೋಗ್ಯ ಭೋಕ್ತೃತ್ವ ಸ್ವಭಾವಕ್ಕಿಂತಲೂ, ಬೇರೆ ಸಂಯೋಗ ಸಂಬಂಧ ವಿಲ್ಲವಾದ್ದರಿಂದ, ದೃಶ್ಯಕ್ಕೆ ಭೋಗ್ಯತ್ವವ, ಪುರುಷನಿಗೆ ಭೋಕ್ತೃತ್ವವು ಇರುವುದೇ ಸಂಯೋಗವೆನ್ನಲ್ಪಡುತ್ತದೆ. ಅಂದರೆ, ಆತ್ಮಭೋಕ್ತೃವೆಂದೂ, ಬುದ್ಧಿ ಭೋಕ್ತ್ರಿಎಂದೂ ಭಾವವು. ಬುದ್ಧಿಯ ಮತ್ತು ಆತ್ಮನ ಸಂಬಂಧವೇ ಅಜ್ಞಾನವು.

**ಅ|| ಆ ಸಂಯೋಗಕ್ಕೆ ಕಾರಣವನ್ನು ಹೇಳುತ್ತಾರೆ.**

೨೪. ಸೂ|| ತಸ್ಯ ಹೇತು ರವಿದ್ಯಾ ।

ತಾ|| ಆ ಸಂಯೋಗಕ್ಕೆ ಅವಿದ್ಯೆಯೇ ಕಾರಣವಾಗುತ್ತದೆ.

ವಿ|| ಅಜ್ಞಾನರೂಪವಾದ ಅವಿದ್ಯೆಯೇ ಸಂಯೋಗಕ್ಕೆ ಕಾರಣವಾಗಿದೆ. ಇದನ್ನು ಬಿಡದವನು ವಿವೇಕಿ (ಯೋಗಿ) ಆಗಲಾರನು. ಇದು ದುಃಖಕ್ಕೂ ಕಾರಣ ವಾಗಿದೆ. ಇದರ ಕೆಲಸಗಳೆಲ್ಲ ಇಹಜೀವನೋಪಾಯವು ವಿನಹ ಪರಸಾಧಕ ಮಾರ್ಗಗಳಲ್ಲ. (ಈ ವಿಷಯವು ಇದೇ ಪಾದದ ೫ನೇ ಸೂತ್ರದಲ್ಲಿ ವಿವರಿಸಿದೆ.)

**ಅ|| ಸಂಯೋಗ ತ್ಯಾಗಲಕ್ಷಣವನ್ನು ಬೋಧಿಸುತ್ತಾರೆ.**

೨೫. ಸೂ|| ತದಭಾವಾ ತ್ಸಂಯೋಗಾಭಾವೋ ಹಾನಂ ತ
ದ್ದೃಶೇಃ ಕೈವಲ್ಯಮ್ ||

ತಾ|| ಸಂಯೋಗಕ್ಕೆ ಪದಾರ್ಥಗಳ ಹಾಗೆ ನಾಶವು ಹುಟ್ಟುವುದಿಲ್ಲ. ವಿವೇಕವು ಹುಟ್ಟದರೆ ಪ್ರಯತ್ನವಿಲ್ಲದೆಯೇ ನಿವೃತ್ತಿಯಾಗುತ್ತದೆ. ಹೀಗಾ ಗುವ ಸಂಯೋಗ ನಿವೃತ್ತಿಯೇ ಕೈವಲ್ಯವೆನ್ನಲ್ಪಡುವುದು.

ವಿ|| ಆತ್ಮಜ್ಞಾನವು ಹುಟ್ಟದಿದ್ದರೆ ಅವಿದ್ಯೆ ನಾಶವಾಗಲಾರದು. ಅವಿದ್ಯಾಕಾರ್ಯ ವಾದ ಸಂಯೋಗನಾಶವೇ ತ್ಯಾಗವು. ಸಂಯೋಗ ನಿವೃತ್ತಿಯೇ ಪುರುಷ ನಿಗೆ ಮೋಕ್ಷವು.

ವಿವೇಕ ಜ್ಞಾನಪ್ರಕಾಶದಿಂದ ಕ್ರಮವಾಗಿ ಬುದ್ಧಿಯ ಆತ್ಮನ ಪ್ರತಿ ಬಿಂಬಗಳು, ಬುದ್ಧಿಯು ನಶಿಸಿಹೋಗಿ ಚೇತನಕ್ಕೆ ಕೈವಲ್ಯಸ್ಥಿತಿ ಹುಟ್ಟು ತ್ತದೆ.

**ಅ|| ದೃಶ್ಯ ತ್ಯಾಗೋಪಾಯವನ್ನು ನಿರೂಪಿಸಿರುತ್ತಾರೆ.**

೨೬. ಸೂ|| ವಿವೇಕ ಖ್ಯಾತಿ ರವಿಪ್ಲವಾ ಹಾನೋಪಾಯಃ ||

**ತಾ|| ಚಂಚಲವಿಲ್ಲದ ವಿವೇಕದಿಂದ ಹುಟ್ಟಿದ ಪರಿಶುದ್ಧಜ್ಞಾನವೇ ಬುದ್ಧ್ಯಾತ್ಮಗಳ ಸಂಯೋಗತ್ಯಾಗಕ್ಕೆ ಉಪಾಯ.**

ವಿ|| ಬುದ್ಧ್ಯಾತ್ಮಗಳ ಸಂಬಂಧದ ಪರಿಶೀಲನವೇ ವಿವೇಕ ಜ್ಞಾನವು. ಈ ವಿವೇಕ ಜ್ಞಾನವನ್ನು ಮುಖ್ಯವಾಗಿ ಸಂಪಾದಿಸಬೇಕು.

ಅವಿದ್ಯಾರೂಪವಾದ ಅಜ್ಞಾನಕ್ಕೆ ವಿರುದ್ಧವಾಗಿರುವ ನಿಜಜ್ಞಾನ ಬಲದಿಂದ ಅವಿದ್ಯೆ ಲಯವಾಗಿ, ಜ್ಞಾತೃತ್ವ ಕರ್ತೃತ್ವಾದ್ಯಭಿಮಾನಗಳು ಬಿಟ್ಟು, ರಜಸ್ತಮೋಗುಣಗಳ ಸಂಬಂಧವಿಲ್ಲದ ಶುದ್ಧಸತ್ತ್ವಪ್ರಧಾನವಾದ ಬುದ್ಧಿ ಅಂತರ್ಮುಖವಾಗಿ ಚಿಚ್ಛಕ್ತಿಯಲ್ಲಿ ಮಿಶ್ರವಾಗುವುದೇ ವಿವೇಕ ಖ್ಯಾತಿಯೆನ್ನಲ್ಪಡುತ್ತದೆ. ಅಂಥಾ ವಿವೇಕಖ್ಯಾತಿ ಸರ್ವದಾ ಏಕಸ್ವರೂಪವಾಗಿ ಪ್ರವರ್ತಿಸುವುದರಿಂದ ವಿಕಾರಸ್ವರೂಪವಾದ ದೃಶ್ಯವು ನಿವರ್ತಿಸುತ್ತದೆ. ಈ ದೃಶ್ಯದ ಕಾರ್ಯಗಳೆಲ್ಲವೂ ಇಲ್ಲದೆ ಹೋಗುವುದರಿಂದ ಕೈವಲ್ಯ ಸ್ಥಿತಿ ಹುಟ್ಟುತ್ತದೆ.

**ಅ|| ವಿವೇಕ ಖ್ಯಾತಿ ಲಕ್ಷಣವನ್ನು ಹೇಳುತ್ತಾರೆ.**

೨೭. ಸೂ|| ತಸ್ಯ ಸಪ್ತಧಾ ಪ್ರಾನ್ತಭೂಮಿಃ ಪ್ರಜ್ಞಾ ||

ತಾ|| ವಿವೇಕ ಜ್ಞಾನವು ಹುಟ್ಟಿದಂಥವನ ಪ್ರಜ್ಞಾವಿಶೇಷವು ಏಳು ವಿಧಗಳಾಗಿವೆ.

ವಿ|| ವಿವೇಕ ಜ್ಞಾನವು ಪರಿಪಾಕಕ್ಕೆ ಬರಬೇಕಾದರೆ ಸಪ್ತ ಭೂಮಿಕೆಗಳಿಗೆ ಆಚೆ ಇರಬೇಕು.

(೧) ಚರಾಚರಾತ್ಮಕದಿಂದ ಪ್ರಧಾನತತ್ತ್ವದವರೆಗೂ ನೆಲೆಸಿರತಕ್ಕ ಈ ಪ್ರಪಂಚದ ವಿಸಿಷ್ಟಾನುಭವವು ಸರ್ವವಿಧಗಳಿಂದಲೂ ದುಃಖರೂಪವಾದದ್ದೆಂದು ನಾನು ಚೆನ್ನಾಗಿ ತಿಳಿದವನಾದೆನು ; ಇನ್ನು ಈ ಪ್ರಪಂಚ ವಿಷಯಕವಾದ ಸಂಗತಿಗಳಲ್ಲಿ ನಾನು ತಿಳಿದುಕೊಳ್ಳುವಂಥಾದ್ದು ಲೇಶವಾದರೂ ಇಲ್ಲವೆಂಬುದು ಮೊದಲನೆಯ ಭೂಮಿಕೆಯಾಗುತ್ತದೆ.

(೨) ನನ್ನ ಚಿತ್ತದಲ್ಲಿರುವ ಅವಿದ್ಯಾದಿಕ್ಲೇಶಗಳೆಲ್ಲವೂ ನಿಶ್ಶೇಷವಾಗಿ ನಶಿಸಿ ಹೋಗಿದೆ; ಇನ್ನು ನಾಶಮಾಡತಕ್ಕ ಕ್ಲೇಶಗಳು ಯಾವುದೂ ಇಲ್ಲವೆಂದೆನ್ನುವುದು. ಎರಡನೆಯ ಭೂಮಿಕೆ.

(೩) ಸಂಪ್ರಜ್ಞಾತ ಸಮಾಧಿಯ ಕಡೆಯ ಭಾಗವಾದ ನಿರೋಧಪರಿಣಾಮದವರೆಗೂ ಇರತಕ್ಕ ಸ್ಥಿತಿಗಳನ್ನು ಸಾಕ್ಷಾತ್ತಾಗಿ ಅನುಭವಕ್ಕೆ ತೆಗೆದುಕೊಂಡೆನು ; ಇನ್ನು ನನ್ನ ಪ್ರಯತ್ನದಿಂದ ಅನುಭವಕ್ಕೆ ತೆಗೆದುಕೊಳ್ಳುವಂಥಾದ್ದು ಅಧ್ಯಾತ್ಮ ಪ್ರಮೇಯಗಳು ಯಾವುದೂ ಇಲ್ಲವೆಂಬುದು ಮೂರನೆಯ ಭೂಮಿಕೆಯಾಗುತ್ತದೆ.

(೪) ಜನನ ಮರಣ ಪ್ರವಾಹರೂಪವಾಗಿ ಪರಿಣಮಿಸುತ್ತಿರುವ ಸುಖದುಃಖ ಮೋಹರೂಪ ಪ್ರಪಂಚಾತ್ಮಕವಾದ ಪ್ರಪಂಚವನ್ನು ಜಯಿಸತಕ್ಕ ಮುಖ್ಯ ಸಾಧನವಾದ ವಿವೇಕ ಜ್ಞಾನವನ್ನು ಸಂಪಾದಿಸಿದೆನು; ಇನ್ನು ಪ್ರಕೃತಿಯನ್ನು ಜಯಿಸುವುದಕ್ಕೆ ನಾನು ಸಂಪಾದಿಸತಕ್ಕದ್ದು ಯಾವುದೂ ಮಿಕ್ಕಿರುವುದಿಲ್ಲವೆಂದೆನ್ನುವುದು ನಾಲ್ಕನೆಯ ಭೂಮಿಕೆಯಾಗುವುದು.

(೫) ಭೋಗ ಮೋಕ್ಷರೂಪವಾದ ವಿಷಯಗಳಲ್ಲಿ ಮಾಡಬೇಕಾದುದನ್ನು ಎಲ್ಲವನ್ನೂ ಮಾಡಿ ನನ್ನ ಬುದ್ಧಿಯು ಕೃತಕೃತ್ಯತ್ವವನ್ನು ಹೊಂದಿದೆಯೆನ್ನುವುದು ಐದನೆಯ ಭೂಮಿಕೆಯಾಗುತ್ತದೆ.

(೬) ಮೋಹರೂಪವಾದ ಅವಿದ್ಯಾದಿಕ್ಲೇಶಗಳು ನಶಿಸಿಹೋಗಿದ್ದರಿಂದ ಜಗದ್ವ್ಯಾಪಾರಕ್ಕೆ ಕಾರಣಗಳಾದ ಸಾತ್ತ್ವಿಕಾದಿ ಗುಣತ್ರಯಗಳ ವ್ಯಾಪಾರವೆಲ್ಲವನ್ನೂ ಹಾಲಿನಿಂದ ತೆಗೆದ ತುಪ್ಪ ಮರಳಿ ಹಾಲಿನಲ್ಲಿ ಬೆರೆಯದಹಾಗೆ ಆ ತ್ರಿಗುಣಗಳು ಮತ್ತೆ ನನ್ನ ಚಿತ್ತವನ್ನು ಹೊಂದದೆನ್ನುವುದು ಆರನೆಯ ಭೂಮಿಕೆ.

(೭) ನನ್ನ ಬುದ್ಧಿಧ್ಯಾನವು ಆತ್ಮನಲ್ಲಿ ಐಕ್ಯವಾಗಿ ನಾನು ಪ್ರಕೃತಿಗೆ ಅತೀತನಾದುದರಿಂದ ಜೀವಿಸಿದ್ದರೂ ಸ್ವಸ್ವರೂಪವಾದ ಕೈವಲ್ಯ ಸ್ಥಿತಿಯನ್ನು ಸ್ವಾಭಾವಿಕವಾಗಿಯೇ ಇರುವವನಾಗಿದ್ದೇನೆ, ಎಂಬುದು ಏಳನೆಯ ಭೂಮಿಕೆಯಾಗುತ್ತದೆ.

ಸ್ವಪ್ರಯತ್ನದಿಂದ ಹುಟ್ಟಿಸಿಕೊಂಡ ಮೊದಲನೆಯ ನಾಲ್ಕು ಭೂಮಿಕೆಗಳಿಂದ, ಇನ್ನು ಮುಂದೆ ಪ್ರಪಂಚಾನುವರ್ತನೆಯಲ್ಲಿಯೂ, ಕರ್ಮಫಲದಲ್ಲಿಯೂ, ನಿಶ್ಶೇಷವಾಗಿ ಆಶೆ ತಪ್ಪಿಹೋಗಿ, ಪರಿಣಾಮವು ಮೊದಲು ಪ್ರಧಾನತತ್ತ್ವದವರೆಗೂ ಇರುವ ಪ್ರಕೃತಿಯ ವಿಷಯಕವಾದ ಸಕಲ ವಿಚಾರಗಳಲ್ಲಿಯೂ, ಬುದ್ಧಿಗೆ ಯಾವವಿಧವಾದ ತೆರೆಯಿಲ್ಲದೆ ಹೋಗುವಂಥ ಪ್ರಜ್ಞಾವಿಶೇಷವು ಹುಟ್ಟುತ್ತದೆ.

ಅಂದರೆ, ಸ್ವಪ್ರಯತ್ನದಿಂದ ಸಾಧಿಸತಕ್ಕ ಮೊದಲು ನಾಲ್ಕು ಭೂಮಿಕೆಗಳು ಚಿತ್ತವೃತ್ತಿವಿಮುಕ್ತಿ ಅಥವ ಕಾರ್ಯವಿಮುಕ್ತಿ ರೂಪಕವಾದದ್ದೆಂದೂ; ಅಪ್ರಯತ್ನವಾಗಿ ಹುಟ್ಟತಕ್ಕ ಮಿಕ್ಕ ಮೂರು ಭೂಮಿಕೆಗಳು ಚಿತ್ತ ವಿಮುಕ್ತಿ ರೂಪಕವಾದದ್ದೆಂದು ಭಾವವು.

**ಅ॥ ವಿವೇಕ ಖ್ಯಾತಿ ಹುಟ್ಟುವುದಕ್ಕೆ ಕಾರಣವನ್ನು ಹೇಳುತ್ತಾರೆ.**

೨೮. ಸೂ॥ ಯೋಗಾಙ್ಗಾನುಷ್ಠಾನಾ ದಶುದ್ಧಿಕ್ಷಯೇ
ಜ್ಞಾನದೀಪ್ತಿರಾ ವಿವೇಕಖ್ಯಾತೇಃ ॥

ತಾ|| ಇದುವರೆವಿಗೂ ಹೇಳಲ್ಪಟ್ಟ ಯೋಗಾಜ್ಞಾನುಷ್ಠಾನದಿಂದ ಹುಟ್ಟುವಂಥ ಚಿತ್ತಸಾತ್ತ್ವಿಕ ಪರಿಣಾಮರೂಪವಾದ ಬುದ್ಧಿಯ ಪ್ರಕಾಶದಿಂದ ಕ್ಲೇಶರೂಪಗಳಾದ ಚಿತ್ತಮಲಗಳು ಹೋಗಿ ವಿವೇಕ ಖ್ಯಾತಿ ಹುಟ್ಟುತ್ತದೆ.

ವಿ|| ವಿವೇಕ ಖ್ಯಾತಿ ಹುಟ್ಟುವ ಪರ್ಯಂತವು ಯೋಗಾಂಗಗಳನ್ನು ಆಚರಿಸಬೇಕು. ಆಗ ಚಿತ್ತಶುದ್ಧಿ ಹುಟ್ಟುತ್ತದೆ. ಅದರಿಂದ ಸಾತ್ತ್ವಿಕ ಪರಿಣಾಮರೂಪವಾದ ಬುದ್ಧಿಗೆ ಪ್ರಕಾಶವು ಹುಟ್ಟುತ್ತದೆ. ಹೀಗೆ ಬುದ್ಧಿಗೆ ಪ್ರಕಾಶವು ಹುಟ್ಟುವುದೇ ವಿವೇಕ ಖ್ಯಾತಿ ಎನ್ನಲ್ಪಡುವುದು.

**ಅ|| ಅಷ್ಟಾಂಗ ಯೋಗಗಳನ್ನು ವಿಭಜಿಸಿ ಹೇಳುತ್ತಾರೆ.**

೨೯. ಸೂ|| ಯಮ ನಿಯ ಮಾಸನ ಪ್ರಾಣಾಯಾಮ ಪ್ರತ್ಯಾ
ಹಾರ ಧ್ಯಾನ ಸಮಾಧಯೋऽಷ್ಟಾವಯವಾಜ್ಞಾನಿ||

ತಾ|| ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ, ಎಂಬಿವು ಎಂಟೂ ಯೋಗಾಂಗಗಳೆನ್ನಲ್ಪಡುವುದು.

(೧) ವಿ|| **ಯಮವೆಂದರೆ**—ಪ್ರಾಣಿಹಿಂಸೆಮಾಡದೆ ಇರುವಿಕೆ, ಸುಳ್ಳುಹೇಳದೆ ಇರುವಿಕೆ, ಇತರರ ಧನವನ್ನು ಅಪಹರಿಸದೆಯಿರುವಿಕೆ, ಭೋಗಸಾಧನ ಪದಾರ್ಥಗಳನ್ನು ಸ್ವೀಕರಿಸದೆ ಇರುವಿಕೆ. ಮುಂತಾದ್ದು.

(೨) **ನಿಯಮವೆಂದರೆ**—ಪರಿಶುದ್ಧತೆ, ಸಂತುಷ್ಟಿ, ನಿಷ್ಠೆ (ತಪಸ್ಸು) ಮಂತ್ರಜಪವು, ಈಶ್ವರಭಕ್ತಿ ಮೊದಲಾದುದನ್ನು ಆಚರಿಸುವಿಕೆ.

(೩) **ಆಸನವೆಂದರೆ**—ವೀರ್ಯನಿಗ್ರಹವನ್ನು ಮಾಡಿ, ದೇಹದಾರ್ಢ್ಯವನ್ನು ಸಂಪಾದಿಸಿ, ಚಿತ್ತಸ್ಥೈರ್ಯ ನಿಮಿತ್ತ ಕೂತುಕೊಂಡಿರುವಿಕೆ.

(೪) **ಪ್ರಾಣಾಯಾಮವೆಂದರೆ**—ಶಾಸ್ತ್ರೋಕ್ತಪ್ರಕಾರವಾಗಿ ಮೂಗಿನ ಒಂದು ದ್ವಾರದಿಂದ ಶ್ವಾಸೆಯನ್ನು ಒಳಕ್ಕೆಳೆದು ಅದನ್ನು ಒಳಗೆ ಇರುವಹಾಗೆ ಮಾಡಿದಮೇಲೆ ಇನ್ನೊಂದು ದ್ವಾರದಿಂದ ಈಚೆಗೆ ಬಿಡುವಿಕೆ ಮೊದಲಾದ ಶ್ವಾಸಸಂಬಂಧದ ಕೃತ್ಯಗಳು. (೧ನೇಯ ಪಾದದ ೩೪ನೇಯ ಸೂತ್ರವನ್ನು ನೋಡಿರಿ.)

(೫) **ಪ್ರತ್ಯಾಹಾರವೆಂದರೆ**—ಇಂದ್ರಿಯಗಳನ್ನು ತಮ್ಮ ತಮ್ಮ ವ್ಯಾಪಾರಗಳಲ್ಲಿ ಪ್ರವರ್ತಿಸದಹಾಗೆ ಮಾಡಿ ಚಿತ್ತಕ್ಕೆ ತಿರುಗಿಸುವಿಕೆ.

(೬) **ಧಾರಣ**—ಎಂದರೆ ಚಿತ್ತವನ್ನು ಒಂದುಕಡೆ ನಿಲ್ಲಿಸುವಿಕೆ.

(೭) **ಧ್ಯಾನವೆಂದರೆ**—ಧಾರಣಾಸ್ಥಳದಲ್ಲಿ ಬುದ್ಧಿಯನ್ನಿರಿಸಿ ಮರೆಯದೆ ಇರುವಿಕೆ.

(೮) **ಸಮಾಧಿಯೆಂದರೆ**—ಧ್ಯಾನವು ದೃಢವಾಗಿ ಧ್ಯಾನಮಾಡುತ್ತಾ ಇಧೇ ನೆಂಬ ನೆನಪು ಹೋಗಿ ಚಿತ್ತವು ವಿಷಯಾಂತರಗಳ ಗೋಚರವಿಲ್ಲದೆ ವ್ಯಾಪಾರಶೂನ್ಯವಾದದ್ದಾಗಿ ಧ್ಯೇಯಾಕಾರವಾಗಿರತಕ್ಕ ಸ್ಥಿತಿಯಾಗಿರುವಿಕೆ. (ಸಮಾಧಿವಿಷಯವಾಗಿ ಮೊದಲನೆಯ ಪಾದದಲ್ಲಿ ಬಹಳವಾಗಿ ಹೇಳಲ್ಪಟ್ಟಿದೆ). ಅಷ್ಟಾಂಗಗಳ ವಿಷಯವಾಗಿ ಕೆಳಗೆ ಉದಹರಿಸಲ್ಪಡುತ್ತೆ. [ಅಷ್ಟಾಂಗ ವಿಷಯಗಳನ್ನು ವಿಸ್ತಾರವಾಗಿ ತಿಳಿದುಕೊಳ್ಳಲಪೇಕ್ಷೆ ಯಿರತಕ್ಕವರು ರಾಜ ಯೋಗ ರತ್ನಾಕರವನ್ನು ನೋಡಬಹುದು.]

**ಅ|| ಯಮ ಲಕ್ಷಣವನ್ನು ಹೇಳುತ್ತಾರೆ.**

೩೦. ಸೂ|| ಅಹಿಂಸಾಸತ್ಯಾಸ್ತೇಯ ಬ್ರಹ್ಮಚರ್ಯಾ
ಪರಿಗ್ರಹಾ ಯಮಾಃ ||

ತಾ|| ಪ್ರಾಣಿಗಳನ್ನು ಹಿಂಸೆ ಮಾಡದೆಯಿರುವಿಕೆ, ಮನಃಪೂರ್ವಕವಾಗಿ ಸತ್ಯವನ್ನು ಹೇಳುವಿಕೆ, ಪರರ ಒಡವೆಗಳನ್ನು ಅಪಹರಿಸದೆ ಇರುವಿಕೆ, ಇಂದ್ರಿಯ ನಿಗ್ರಹವನ್ನು ಮಾಡುವಿಕೆ, ಭೋಗಸಾಧನಪದಾರ್ಥಗಳನ್ನು ತೆಗೆದುಕೊಳ್ಳದೆ ಯಿರುವಿಕೆ, ಇವು ಯಮವು.

ವಿ|| ಮೇಲೆ ಹೇಳಿದ ಐದನ್ನು ಪ್ರಥಮದಲ್ಲಿ ವರ್ಜಿಸಿ, ಆಮೇಲೆ ನಿಯಮವನ್ನು ಅಭ್ಯಾಸಮಾಡುವುದಕ್ಕೆ ಪ್ರಯತ್ನಮಾಡಬೇಕು. ಯಮದ ಕೃತ್ಯಗಳನ್ನು ವರ್ಜಿಸದೆ, ನಿಯಮವನ್ನು ಆಚರಿಸಿದರೆ ಸಾಧಕನಿಗೆ ಹಾನಿಯನ್ನುಂಟು ಮಾಡುವುದು. ಇವುಗಳು ನಿಷಿದ್ಧಕಾರ್ಯಗಳಾದುದರಿಂದ ಅವಶ್ಯಕವಾಗಿ ಬಿಡಬೇಕು.

**ಅ|| ಯಮಾಂಗಗಳನ್ನು ಯಾವಕಾಲದಲ್ಲಿಯೂ ಬಿಡಕೂಡದೆಂದು ಹೇಳುತ್ತಾರೆ.**

೩೧. ಸೂ|| ಏತೇ ಜಾತಿ ದೇಶ ಕಾಲ ಸಮಯಾನವಚ್ಛಿನ್ನಾ
ಸ್ಸಾರ್ವ ಭೌಮಾ ಮಹಾವ್ರತಮ್ ||

ತಾ|| ಜಾತಿ, ದೇಶ, ಕಾಲ, ಸಮಯ, ಗಳೆಂಬಿವುಗಳಲ್ಲಿಯಾಗಲಿ, ಮತ್ತು ಯಾವ ಅವಸ್ಥೆಯಲ್ಲಿಯಾಗಲಿ ಯಮಾಂಗಗಳನ್ನು ತಪ್ಪದೆ ಆಚರಿಸಬೇಕು.

ವಿ॥ ಬ್ರಾಹ್ಮಣತ್ವಾದಿ ಜಾತಿಗಳು, ಕಾಶೀರಾಮೇಶ್ವರಾದಿ ದೇಶಗಳು, ಶಿವರಾತ್ರಿ ಏಕಾದಶ್ಯಾದಿ ಕಾಲಗಳು, ಬ್ರಾಹ್ಮಣ ಪ್ರಯೋಜನವು, ವಿವಾಹಾದಿ ಸಮಯಗಳು, ಎಂಬಿವುಗಳಲ್ಲಿ ಎಂಥಾ ಸಂದರ್ಭದಲ್ಲಿಯಾಗಲಿ ಹಿಂಸೆಮಾಡಬಾರದು. ಅನೃತವನ್ನು ಹೇಳಬಾರದು; ಪರದ್ರವ್ಯವನ್ನು ಅಪಹರಿಸಬಾರದು; ಇಂದ್ರಿಯವನ್ನು ಪ್ರಿಯ ಮಾಡಬಾರದು (ವ್ಯಭಿಚಾರ ಮಾಡಬಾರದು) ಭೋಗ ಸಾಧನ ವಸ್ತುಗಳನ್ನು ತೆಗೆದುಕೊಳ್ಳಬಾರದು; ಎಂದು ಹೀಗೆ ನಿರಂತರವೂ ಜ್ಞಾಪಕದಲ್ಲಿಟ್ಟುಕೊಂಡು ಪ್ರವರ್ತಿಸುತ್ತಿರುವ ಮಹಾವ್ರತವು ಯಮವೆನ್ನಲ್ಪಡುವುದು.

**ಅ॥ ನಿಯಮ ಲಕ್ಷಣವನ್ನು ನಿರೂಪಿಸುತ್ತಾರೆ.**

೩೨. ಸೂ॥ ಶೌಚ ಸಂತೋಷ ತಪ ಸ್ಸ್ವಾಧ್ಯಾ, ಯೇಶ್ವರ ಪ್ರಣಿಧಾನಾನಿ ನಿಯಮಃ ॥

ತಾ॥ ಶುಚಿತ್ವ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರ ಶಕ್ತಿ, ಇವುಗಳು ನಿಯಮವೆನ್ನಲ್ಪಡುವುದು.

ವಿ॥ ಮಣ್ಣು, ನೀರು ಮುಂತಾದವುಗಳಿಂದ ದೇಹವನ್ನು ಶುದ್ಧಿಮಾಡುವುದು ಬಾಹ್ಯಶೌಚ, ಮೈತ್ರ್ಯಾದಿ ಪರಿಕರ್ಮಗಳಿಂದ ಚಿತ್ತದ ಮಲವನ್ನು ಹೋಗಲಾಡಿಸಿಕೊಳ್ಳುವುದು ಅಂತರ ಶೌಚ, ಎಂದೆರಡು ವಿಧ. ಶುಚಿತ್ವವನ್ನು (೧ನೇ ಪಾದದ ೩೩ನೇ ಸೂತ್ರದಲ್ಲಿ ನೋಡಿರಿ) ನಿರಂತರವು ಸಮಾಧಾನ ಮನಸ್ಕನಾಗಿರುವ ಸಂತೋಷವನ್ನು, ನಿಷ್ಠೆಯನ್ನು ಪ್ರಣವಪೂರ್ವಕವಾದ ವೇದ ಮಂತ್ರದ ಜಪವನ್ನು (ಇದೇ ಪಾದದ ೧ನೇ ಸೂತ್ರವನ್ನು ನೋಡಿರಿ) ನಿಯಮವೆಂದು ಹೇಳುತ್ತಾರೆ.

**ಅ॥ ಯಮ ನಿಯಮಗಳಿಂದ ಯೋಗವು ಸಿದ್ಧಿಸುವುದೆನ್ನುತ್ತಾರೆ.**

೩೩. ಸೂ॥ ವಿತರ್ಕ ಬಾಧನೇ ಪ್ರತಿಪಕ್ಷ ಭಾವನಮ್ ।

ತಾ॥ ಯೋಗ ಪ್ರತಿಬಂಧಕಗಳಾದ ಹಿಂಸಾದಿಗಳನ್ನು ನಾಶ ಮಾಡುವುದಕ್ಕೆ ಅಹಿಂಸಾದಿಗಳ ಭಾವನೆಯೇ ಕಾರಣವಾಗಿದೆ.

ವಿ॥ ಯೋಗವಿರೋಧವಾದ ಹಿಂಸಾದಿಗಳಿಗೆ ಪ್ರತಿ ರೋಧವಾದ ಅಹಿಂಸಾದಿಗಳನ್ನು ಭಾವಿಸುವುದರಿಂದ ಮಹಾ ಪಾತಕಗಳಿಗೆ ಕಾರಣಗಳಾದ ಹಿಂಸಾದಿಗಳು ನಾಶನವಾಗಿ ಯೋಗವು ಸಿದ್ಧಿಸುವುದು. ಆದುದರಿಂದ ಯಮ ನಿಯಮಗಳ ಆಚರಣೆಯಿಲ್ಲದವರೆಂದಿಗೂ, ಉತ್ತಮಸ್ಥಿತಿಗೆ ಯೋಗ್ಯರಲ್ಲ. ಸರ್ವೋತ್ತಮ ಸ್ಥಿತಿಯನ್ನು (ಯೋಗವನ್ನು) ಅಭಿಲಾಷೆ ಮಾಡುವವರಿಗೆ ಇದು ಅವಶ್ಯಕವಾಗಿದೆ.

**ಅ|| ಯೋಗ ವಿರೋಧದ ಸ್ವರೂಪವನ್ನು ಅದರ ಕಾರಣವನ್ನು ಮತ್ತು ಅದರ ಭೇದವನ್ನು ಮತ್ತು ಫಲವನ್ನು ಹೇಳುತ್ತಾರೆ.**

೩೪. ಸೂ|| ವಿತರ್ಕಾ ಹಿಂಸಾದಯಃ ಕೃತಕಾರಿತಾನುಮೋದಿತಾ ಲೋಭ ಕ್ರೋಧ ಮೋಹಪೂರ್ವಕಾ ಮೃದು ಮಧ್ಯಾಧಿ ಮಾತ್ರಾ ದುಃಖಾಜ್ಞಾನಾನನ್ತಫಲಾ ಇತಿಪ್ರತಿಪಕ್ಷ ಭಾವನಮ್ ||

ತಾ|| ತಾನು ಮಾಡುವಿಕೆ, ಇತರರ ಕೈಯಿಂದ ಮಾಡಿಸುವಿಕೆ, ಇತರರು ಮಾಡಿದುದನ್ನು ನೋಡಿ ಸಂತೋಷಿಸುವಿಕೆ, ಅಂಥವುಗಳ ಸ್ವರೂಪವಾಗಿರುವುದು; ಆಶೆ, ದ್ವೇಷವು, ಭ್ರಮೆ, ಇವು ಕಾರಣ ಗಳಾಗಿರುವುದೂ; ಮಂದ, ಮಧ್ಯ, ತೀವ್ರಗಳೆಂಬ ಭೇದಗಳುಳ್ಳದ್ದೂ; ದುಃಖವು, ಅಜ್ಞಾನ, ಇವುಗಳೇ ಪಾರವಿಲ್ಲದ ಫಲಗಳ ಕೊಡುವಂಥಾ ಯೋಗವಿರೋಧವಾದ ಹಿಂಸಾದಿ ಕೃತ್ಯಗಳನ್ನು ಬಿಡುವುದಕ್ಕೆ ಅಹಿಂಸಾದಿ ಗಳನ್ನು ಅಭ್ಯಾಸಮಾಡಬೇಕು.

ವಿ|| ಹಿಂಸಾದಿಗಳಲ್ಲಿ ಸಿಕ್ಕಿಕೊಂಡಿರುವ ಚಿತ್ತವು ತನ್ನನ್ನು ಮಾಡುವಹಾಗೆ ಮಾಡುವುದು. ಪರರಕೈಯಿಂದ ಮಾಡಿಸುವುದಕ್ಕೆ ಪ್ರೇರೇಪಿಸುವುದು. ಇತರರು ಮಾಡಿರುವುದನ್ನು ನೋಡಿ ಸಂತೋಷಪಡಿಸುತ್ತದೆ. ಅದರ ಮೇಲೆ ಆಶೆಯನ್ನು ಹುಟ್ಟಿಸುತ್ತದೆ. ಕ್ರೋಧವನ್ನು ಹುಟ್ಟಿಸುತ್ತದೆ. ಮೋಹವು ಹುಟ್ಟುತ್ತದೆ. ಮಂದ ಮಧ್ಯ, ತೀವ್ರಗಳಾದ ಅವಸ್ಥೆಗಳಲ್ಲಿ ಬೀಳುವಹಾಗೆ ಮಾಡುವುದು. ದುಃಖವು ಹುಟ್ಟಿಸುತ್ತದೆ. ಇವುಗಳಿಂದ ಅಪಾರವಾದ ದುಃಖಫಲಗಳು ಸಂಪ್ರಾಪ್ತವಾಗಿ ಅನೇಕ ಜನ್ಮಗಳನ್ನು ಕಲ್ಪಿಸುತ್ತದೆ. ಆದ್ದರಿಂದ ಮುಕ್ತಿ ಹೊಂದುವುದಕ್ಕೆ ಸಾಧ್ಯವಿಲ್ಲದೆ ಹೋಗುವುದು. ಆದಕಾರಣ ಯೋಗ ಪ್ರತಿಬಂಧಕಗಳಾದ ಹಿಂಸೆಯನ್ನು ಮಾಡದೆ ಇರಬೇಕು.

**ಅ|| ಅಹಿಂಸಾಭ್ಯಾಸದ ಪ್ರಯೋಜನವನ್ನು ಹೇಳುತ್ತಾರೆ.**

೩೫. ಸೂ|| ತತ್ಸನ್ನಿಧೌ ವೈರತ್ಯಾಗಃ |

ತಾ|| ಅಹಿಂಸಾಭ್ಯಾಸವನ್ನು ಮಾಡುವಂಥ ಯೋಗಿವಾಸಮಾ ಡುವ ಸ್ಥಳದಲ್ಲಿ ಸ್ವಾಭಾವಿಕವಾಗಿ ವೈರ ವಿರತಕ್ಕ ಗೋ ವ್ಯಾಘ್ರಗಳು,

ಗಜ ಸಿಂಹಗಳು, ಮೊದಲಾದಂಥವುಗಳು ಕೂಡ ವೈರವನ್ನು ಬಿಟ್ಟು ಪ್ರವರ್ತಿಸುತ್ತವೆ.

ವಿ॥ ಜಾಗ್ರತ್ಸ್ವಪ್ನಾದಿಗಳಲ್ಲಿ ಕೂಡ ಮನೋವಾಕ್ಕಾಯ ಕರ್ಮಗಳಿಂದ ಹಿಂಸೆ ಮಾಡಕೂಡದೆಂದಿರುವ ಯೋಗಿ (ವಿವೇಕಿ) ಸಮೀಪದಲ್ಲಿ ಸ್ವಭಾವಸಿದ್ಧವಾಗಿ ದ್ವೇಷದಿಂದ ಕೂಡಿ ಪ್ರವರ್ತಿಸುವ ವೈರಿವರ್ಗಗಳಾದ ಪ್ರಾಣಿಗಳೆಲ್ಲವೂ ತಮ್ಮ ತಮ್ಮ ವೈರತ್ವವನ್ನು ಬಿಟ್ಟು ಪರಸ್ಪರ ಸ್ನೇಹಭಾವದಿಂದ ಇರುತ್ತದೆ.

**ಅ॥ ಸತ್ಯಾಭ್ಯಾಸಿಗೆ ಆಗುವ ಫಲವನ್ನು ನಿರೂಪಿಸುತ್ತಾರೆ.**

೩೬. ಸೂ॥ ಸತ್ಯ ಪ್ರತಿಷ್ಠಾಯಾಂ ಕ್ರಿಯಾ ಫಲಾಶ್ರಯತ್ವಮ್॥

ತಾ॥ ಸತ್ಯವು ಅಭ್ಯಾಸವಾಗಿರತಕ್ಕವನು, ಅಗ್ನಿಷ್ಟೋಮಾದಿ ಕರ್ಮಗಳು ಮಾಡದೆಹೋದರೂ, ಆತನಿಗೆ ಆಯಾ ಕರ್ಮಗಳ ಫಲಗಳು ಲಭಿಸುತ್ತವೆ.

ವಿ॥ ಸದಾ ಸತ್ಯವನ್ನು ಬಿಡದೆ ಅಭ್ಯಾಸವನ್ನು ಮಾಡುವವನಿಗೆ, ಅಂದರೆ ಸತ್ಯ ಹೇಳುವವನಿಗೆ ಯಾವ ವಿಧವಾದಸತ್ಕರ್ಮಗಳು ಮಾಡದೆಹೋದರೂ ಆ ಕರ್ಮಗಳಿಗೆ ತಕ್ಕ ಫಲಗಳೆಲ್ಲವು ಪ್ರಾಪ್ತವಾಗುತ್ತವೆ. ಮತ್ತು ಆತನ ವಚನಮಾತ್ರದಿಂದಲೇ, ಕರ್ಮಗಳನ್ನು ಮಾಡದ ಇತರರಿಗೂ ಆ ಕರ್ಮ ಫಲವು ಲಭಿಸುತ್ತದೆ. ಅಂದರೆ ಸತ್ಯದಲ್ಲಿ ದೃಷ್ಟಿಯಿರತಕ್ಕವನಿಗೆ ನಿಗ್ರಹಾನುಗ್ರಹ ಶಕ್ತಿಯಿರುವುದೆಂದು ಭಾವವು.

**ಅ॥ ಕಳ್ಳತನವನ್ನು ಮಾಡದೆಯಿರುವವನಿಗೆ ಆಗುವ ಫಲವನ್ನು ಹೇಳುತ್ತಾರೆ.**

೩೭. ಸೂ॥ ಅಸ್ತೇಯ ಪ್ರತಿಷ್ಠಾಯಾಂ ಸರ್ವರತ್ನೋಪಸ್ಥಾನಮ್ ॥

ತಾ॥ ಕಳ್ಳತನವನ್ನು ಮಾಡದೆ ಯಿರುವವನಿಗೆ ಸಮಸ್ತರತ್ನಗಳು ಪ್ರಾಪ್ತಿಸುತ್ತದೆ.

ವಿ॥ ಪರರ ದ್ರವ್ಯವನ್ನು ಅಪಹರಿಸದೆ ಇರುವುದಕ್ಕೆ ಅಭ್ಯಾಸ ಮಾಡಿದ ದೃಢಚಿತ್ತವಿರುವವನಿಗೆ, ತಾನು ಆಶೆಯಿಲ್ಲದವನಾದರೂ, ಅಪ್ರಯತ್ನವಾಗಿಯೇ ಸಕಲ ಸ್ಥಳಗಳಲ್ಲಿರುವ ಸಮಸ್ತ ರತ್ನಗಳು ತನ್ನಿಷ್ಟಕ್ಕೆತಾನೆ ಲಭಿಸುತ್ತದೆ.

**ಅ|| ಇಂದ್ರಿಯ ನಿಗ್ರಹದಿಂದ ಪ್ರಯೋಜನವನ್ನು ಹೇಳುತ್ತಾರೆ.**

೩೮. ಸೂ|| ಬ್ರಹ್ಮಚರ್ಯ ಪ್ರತಿಷ್ಠಾಯಾಂ ವೀರ್ಯಲಾಭಃ ||

ತಾ|| ಬ್ರಹ್ಮಚರ್ಯವನ್ನು ಅಭ್ಯಾಸಮಾಡುವುದರಿಂದ ಬ್ರಹ್ಮ ವರ್ಚಸ್ಸು ಲಭಿಸುತ್ತದೆ.

ವಿ|| ಇಂದ್ರಿಯ ನಿಗ್ರಹವನ್ನು ಅಭ್ಯಾಸಮಾಡುವುದಕ್ಕೆ ಸ್ಥೈರ್ಯವಿರುವಾತನಿಗೆ ವೀರ್ಯ (ತೇಜವು=ಬ್ರಹ್ಮವರ್ಚಸ್ಸು)ದ ಲಾಭವು ಉಂಟಾಗುತ್ತದೆ. ಮತ್ತು ಬಲವು ಉಂಟಾಗುತ್ತೆ. ಮೇಧಸ್ಸು ಪರಿಶುದ್ಧವಾಗುವುದು. ಇವುಗಳಿಂದ ಆತ್ಮಜ್ಞಾನವು ಗೋಚರಿಸುತ್ತದೆ. ಆದುದರಿಂದ ಇಂದ್ರಿಯವನ್ನು ಚಲಿಸ ಗೊಳಿಸದೆ ಕಾಪಾಡಬೇಕು.

**ಅ|| ಭೋಗಸಾಧನ ವಸ್ತುಗಳನ್ನು ಗ್ರಹಿಸದವನಿಗೆ ಉಂಟಾಗುವ ಫಲವನ್ನು ನಿರೂಪಿಸುತ್ತಾರೆ.**

೩೯. ಸೂ|| ಅಪರಿಗ್ರಹ ಸ್ಥೈರ್ಯ ಜನ್ಮಕಥಂ ತಾ ಸಂಬೋಧಃ ||

ತಾ|| ಭೋಗಸಾಧನೆ ವಸ್ತುಗಳನ್ನು ಸ್ವೀಕರಿಸದ ಅಭ್ಯಾಸ ವಿರುವಾತನಿಗೆ, ಪೂರ್ವ ಜನ್ಮಗಳಲ್ಲಿ ತಾನು ಯಾವರೀತಿಯಾಗಿದ್ದೆನೆಂಬ ಜ್ಞಾನವುಂಟಾಗುತ್ತದೆ.

ವಿ|| ಯಾವಾಗಲೂ ಅಪರಿಗ್ರಹವನ್ನು ಅಭ್ಯಾಸಮಾಡುವ ದೃಢಮನಸ್ಕನಿಗೆ ಜನ್ಮಾಂತರಗಳಲ್ಲಿ ತಾನು ಯಾವಪ್ರಾಣಿಯಾಗಿದ್ದೆನೆಂಬುದು, ಯಾವ ಕೆಲಸಮಾಡಿದೆನೆಂಬುದೂ, ಯಾವ ಫಲವನ್ನು ಹೊಂದಿದ್ದೆನೆಂಬುದು ಇವೇ ಮೊದಲಾದ ವಿಷಯಗಳು ಜ್ಞಪ್ತಿಗೆ ಬರುವುವು. ಅಂದರೆ ಪೂರ್ವ ಜನ್ಮದ ಜ್ಞಾನವು ಗೋಚರಿಸುತ್ತದೆಂದು ಭಾವವು. ಆದ್ದರಿಂದ ಇದನ್ನು ಯೋಗಿಯಾಗು ವಂಥವನು ಪ್ರಾರಂಭದಲ್ಲಿಯೇ ಅಭ್ಯಾಸಮಾಡಬೇಕು.

**ಅ|| ಶೌಚದ ಫಲವನ್ನು ಹೇಳುತ್ತಾರೆ.**

೪೦. ಸೂ|| ಶೌಚಾ ತ್ಸ್ವಾಙ್ಗ ಜುಗುಪ್ಸಾ ಪರೈರ ಸಂಸರ್ಗಃ ||

ತಾ|| ಶುಚಿತ್ವವನ್ನು ಅಭ್ಯಾಸಮಾಡುವುದರಿಂದ ತನ್ನ ಅವಯುವ ಗಳಲ್ಲಿ ಅಸಹ್ಯವೂ, ಇತರರ ಸಂಬಂಧವು ಕೂಡದೆಂದೂ ಬೋಧವಾಗು ವುದು.

ವಿ|| ಪರಿಶುದ್ಧತೆಯನ್ನು ಅಭ್ಯಾಸ ಮಾಡುವಾತನಿಗೆ, ತನ್ನ ದೇಹೋತ್ಪತ್ತಿಗೆ ಕಾರಣಗಳಾದ ಮಾತಾಪಿತೃ ದೇಹಜನ್ಯ ಶುಕ್ಲಶೋಣಿತರೂಪವಾದ

ಪರ್ಯಾಲೋಚನೆಯಿಂದ ತನ್ನ ದೇಹದಲ್ಲಿ ಜುಗುಪ್ಸೆಯು, ಪರರನ್ನು ಸ್ಪೃಶಿಸುವುದು ಕೇವಲ ಅಸಹ್ಯವೆಂದು ತೋರುವುದು. ಮತ್ತು, ಶುಚಿತ್ವದಿಂದ ಬುದ್ಧಿಮಾಂದ್ಯವು ಹೋಗಿ ಜಾಗರೂಕತೆಯುಂಟಾಗುತ್ತದೆ. ಪಾಪಿಗಳ ಸಂಸರ್ಗತೆಯನ್ನು ತಪ್ಪಿಸುತ್ತದೆ. ಆದುದರಿಂದ ಅವರ ಸಂಸರ್ಗ ದಿಂದ ಉಂಟಾಗುವ ದೋಷಗಳು ದುರ್ಗುಣಗಳು ಎಷ್ಟು ಮಾತ್ರವು ಹತ್ತಿರ ಬರಲಾರವು. ಆದಕಾರಣ ಇದನ್ನು ಎಲ್ಲರೂ ಅಭ್ಯಾಸಮಾಡಬೇಕು.

**ಅ|| ಶೌಚದಿಂದ ಉಂಟಾಗುವ ವಿಶೇಷ ಫಲವನ್ನು ಹೇಳುತ್ತಾರೆ.**

೪೧. ಸೂ|| ಸತ್ತ್ವಶುದ್ಧಿ ಸೌಮನಸ್ಯೈಕಾಗ್ರತೇಂದ್ರಿಯ
ಜಯಾತ್ಮ ದರ್ಶನ ಯೋಗ್ಯತ್ವಾನಿಚ ||

ತಾ|| ಶುಚಿತ್ವದಿಂದ ಸತ್ತ್ವಶುದ್ಧಿಯು, ಸತ್ತ್ವಶುದ್ಧಿಯಿಂದ ಸೌಮನಸ್ಯವು, ಸೌಮನಸ್ಯದಿಂದ ಚಿತ್ತೈಕಾಗ್ರತೆ, ಚಿತ್ತೈಕಾಗ್ರತೆ ಯಿಂದ ಇಂದ್ರಿಯಜಯವು, ಇಂದ್ರಿಯಜಯದಿಂದ ಆತ್ಮದರ್ಶನ ಜ್ಞಾನ ವುಂಟಾಗುತ್ತದೆ.

ವಿ|| ಪರಿಶುದ್ಧನಾದವನಿಗೆ ರಜಸ್ತಮೋಗುಣಗಳ ವಶತೆಯಿಂದಲೂ, ಮನಸ್ಸಿನಲ್ಲಿ ಕೊಂಚವಾದರೂ ದುಃಖವಿಲ್ಲದ ಪ್ರೀತಿಯೂ, ಚಿತ್ತ ಸ್ಥೈರ್ಯವೂ, ವಿಷಯ ಗಳಲ್ಲಿ ವಿಮುಖತೆಯೂ, ಬ್ರಹ್ಮಜ್ಞಾನದಲ್ಲಿ ಸಮರ್ಥತೆಯು ಹುಟ್ಟುತ್ತದೆ.

**ಅ|| ಸಂತೋಷದಿಂದ ಇರುವವನಿಗೆ ಆಗುವ ಪ್ರಯೋಜನವನ್ನು ಹೇಳುತ್ತಾರೆ.**

೪೨. ಸೂ|| ಸಂತೋಷಾದನುತ್ತಮ ಸ್ಸುಖ ಲಾಭಃ ||

ತಾ|| ಸಂತೋಷಾತಿಶಯದಿಂದ ನಿರತಿಶಯವಾದ ಆನಂದವು ಹುಟ್ಟುತ್ತದೆ.

ವಿ|| ನಿರಂತರವು ಸಂತೋಷದಿಂದ ಇರುವಾತನಿಗೆ ಬ್ರಹ್ಮಾನಂದದ ಹಾಗೆ ನಿರತಿ ಶಯಾನಂದವು ಪ್ರಾಪ್ತಿಸುತ್ತದೆ. ಅಂದರೆ, ಸಂತುಷ್ಟಿಯಿಂದ ಪ್ರಾಪ್ತಿಸಿದ್ದ ನ್ನು ಹೊಂದಿ ಸಂತೋಷವನ್ನು ಹೊಂದುವಾತನಿಗೆ, ಆಶೆ ಹುಟ್ಟುವುದಕ್ಕೆ ಅವಕಾಶವಿರುವುದಿಲ್ಲ ಆದುದರಿಂದ ಸಕಲದುಃಖಗಳು ನಿವೃತ್ತಿಯಾಗುವುದು.

**ಅ|| ತಪಸ್ಸಿನಿಂದಾಗುವ ಪ್ರಯೋಜನವನ್ನು ಹೇಳುತ್ತಾರೆ.**

೪೩. ಸೂ|| ಕಾಯೇನ್ದ್ರಿಯಸಿದ್ಧಿ ರಶುದ್ಧಿಕ್ಷಯಾ ತ್ತಪಸಃ ||

ತಾ|| ತಪಸ್ಸು ಮಾಡುವುದರಿಂದ ಚಿತ್ತದಲ್ಲಿ ಮಲಿನವು ಹೋಗುತ್ತದೆ. ಆದುದರಿಂದ ಜ್ಞಾನೇನ್ದ್ರಿಯ, ಕರ್ಮೇನ್ದ್ರಿಯಗಳಿಗೆ ಅದ್ಭುತ ಶಕ್ತಿ ಹುಟ್ಟುತ್ತದೆ.

ವಿ|| ಕೃಚ್ಛ್ರ ಚಾಂದ್ರಾಯಣಾದಿಗಳಿಂದ, ಚಿತ್ತವು ಮಲಿನರಹಿತವಾಗಿ ಪರಿಶುದ್ಧವಾಗಿರುತ್ತದೆ. ಆದ್ದರಿಂದ ಸ್ವೇಚ್ಛಾನುಸಾರವಾಗಿ ತನ್ನ ದೇಹವನ್ನು ಅಣುರೂಪವಾಗಿಯಾಗಲಿ, ಮಹದ್ರೂಪವಾಗಿಯಾಗಲಿ ಮಾಡಿಕೊಳ್ಳುವ ಶಕ್ತಿಯು ; ಮತ್ತು ಇಂದ್ರಿಯಗಳಿಗೆದುರಾಗಿರುವ ಸೂಕ್ಷ್ಮವಸ್ತುಗಳಿಂದಾಗಲಿ, ಗೋಚರವಾಗದೆ ಇರತಕ್ಕ ಯಾವ ವಸ್ತುಗಳೇ ಆಗಲಿ ಗೋಚರವಾಗುವಂಥ ಶಕ್ತಿಯು ಹುಟ್ಟುತ್ತದೆ.

**ಅ|| ಜಪವನ್ನು ಮಾಡುವವನಿಗೆ ಆಗುವಫಲವನ್ನು ಹೇಳುತ್ತಾರೆ.**

೪೪. ಸೂ|| ಸ್ವಾಧ್ಯಾಯಾ ದಿಷ್ಟದೇವತಾ ಸಂಪ್ರಯೋಗಃ ||

ತಾ|| ತನಗೆ ಯಿಷ್ಟವಾದ ಮಂತ್ರವನ್ನು ಜಪಿಸುವುದರಿಂದ ತಾನು ಕೋರಿದ ದೇವತೆ ಪ್ರತ್ಯಕ್ಷವಾಗುವುದು.

ವಿ|| ವೇದಮಂತ್ರಗಳಲ್ಲಿ ತನಗೆ ಅಭಿಮತವಾದ ದೇವತಾ ಮಂತ್ರವನ್ನು ಓಂಕಾರ ಪೂರ್ವಕವಾಗಿ ಜಪಿಸುವುದರಿಂದ ಆದೇವತೆ ಸಾಕ್ಷಾತ್ಕಾರವಾಗಿ ತನ್ನ ಯಿಷ್ಟಾರ್ಥವನ್ನು ನೆರವೇರಿಸುವುದು. ಮತ್ತು ಪ್ರಣವಪೂರ್ವಕವಾದ ಈಶ್ವರೋಪಾಸನೆಯಿಂದ ಚಿತ್ತವು ನಿರ್ಮಲತ್ವವನ್ನು ಹೊಂದುತ್ತದೆ. ಆದುದರಿಂದ ದುಸ್ಸಂಕಲ್ಪಗಳೆಲ್ಲವು ನಾಶವಾಗುವುದು.

**ಅ|| ಈಶ್ವರಪ್ರಣಿಧಾನದಿಂದಾಗುವ ಲಾಭವನ್ನು ಹೇಳುತ್ತಾರೆ.**

೪೫. ಸೂ|| ಸಮಾಧಿ ಸಿದ್ಧಿ ರೀಶ್ವರ ಪ್ರಣಿಧಾನಾತ್ ||

ತಾ|| ಪರಮೇಶ್ವರನಲ್ಲಿ ಅತಿಶಯವಾದ ಭಕ್ತಿಮಾಡುವುದರಿಂದ ಸಂಪ್ರಜ್ಞಾತ ಸಮಾಧಿ ಲಾಭವು ಹುಟ್ಟುತ್ತದೆ.

ವಿ|| ಈಶ್ವರನಲ್ಲಿ ಅಧಿಕವಾದ ಭಕ್ತಿಯನ್ನಿಡುವುದರಿಂದ ಚಿತ್ತದಲ್ಲಿ ಸಕಲ ಮಲಿನಗಳು ನಶಿಸುತ್ತದೆ. ಆ ಪರಮೇಶ್ವರನಿಗೆ ಸಮೀಪದಲ್ಲಿರುವ ಸಂಪ್ರಜ್ಞಾತ ಸಮಾಧಿ ವರೆಗೂ ನಿರಾಟಂಕವಾಗಿ ಸಿದ್ಧಿಸುತ್ತದೆ. (ಸಂಪ್ರಜ್ಞಾತ ಸಮಾಧಿ ಲಕ್ಷಣವು ೧ನೇ ಪಾದದ ೧೭ನೇ ಸೂತ್ರದಲ್ಲಿ ವಿಸ್ತಾರವಾಗಿ ಹೇಳಿದೆ.)

೪೬. ಸೂ|| ಸ್ಥಿರ ಸುಖ ಮಾಸನಮ್ |

ತಾ|| ಆಸನಗಳು ಸ್ಥಿರವನ್ನು ಸುಖವನ್ನು ಹುಟ್ಟಿಸುತ್ತದೆ.

೭॥ ವೀರಾಸನ, ಸ್ವಸ್ತಿಕಾಸನ, ಪದ್ಮಾಸನ, ಸಿದ್ಧಾಸನ, ಸಿಂಹಾಸನ, ಕುಕ್ಕುಟಾಸನ, ಭದ್ರಾಸನ, ಯೋಗಾಸನ, ಮೊದಲಾಗಿರುವ ಆಸನಗಳಲ್ಲಿ ಯಾರಿಗೆ ಯಾವ ಆಸನವು ನಿಶ್ಚಲವು ಮತ್ತು ಸುಖಕರವಾಗಿರುವುದೋ ಅದನ್ನು ಅವರು ಅಭ್ಯಾಸಮಾಡಬೇಕು. ಆಸನಗಳ ದೃಢಾಭ್ಯಾಸದಿಂದ ಚಿತ್ತಕ್ಕೆ ಸ್ಥಿರತ್ವವು ಹುಟ್ಟುತ್ತದೆ.

ಆಸನಗಳು ಎಂಭತ್ತುನಾಲ್ಕು. ಇದಲ್ಲದೆ ಮತಾಂತರಗಳು ಕೆಲವಿವೆ. ಅದರಲ್ಲಿ ಮುಖ್ಯವಾದವುಗಳಲ್ಲಿ ಕೆಲವನ್ನು ಇಲ್ಲಿ ಹೇಳಲ್ಪಡುತ್ತೆ.

(೧) **ವೀರಾಸನ**—ಒಂದು ತೊಡೆಯಮೇಲೆ ಒಂದು ಪಾದವನ್ನು, ಬಲ ತೊಡೆಯಮೇಲೆ ಎಡದ ಪಾದವನ್ನಿರಿಸಿ, ಶರೀರವನ್ನು ಡೊಂಕೆಯಿಲ್ಲದೆ ನಿಲ್ಲುಸುವಿಕೆ.

(೨) **ಸ್ವಸ್ತಿಕಾಸನ**—ಪಿರ್ರೆಗಳು ಮತ್ತು ತೊಡೆಗಳ ಮಧ್ಯೆಯಲ್ಲಿ ಪಾದಗಳನ್ನಿರಿಸಿ ದೇಹವನ್ನು ಸರಿಯಾಗಿ ನಿಲ್ಲಿಸುವಿಕೆ.

(೩) **ಪದ್ಮಾಸನ**—ಎಡದ ತೊಡೆಯಮೇಲೆ ಬಲಪಾದವನ್ನು, ಬಲದ ತೊಡೆಯ ಮೇಲೆ ಎಡಪಾದವನ್ನಿರಿಸಿ, ಹಿಂಭಾಗದಿಂದ ಬಲಕೈಯಲ್ಲಿ ಎಡದ ತೊಡೆಯ ಮೇಲಿರುವ ಬಲಪಾರ್ಶ್ವದ ಕಾಲಿನ ಹೆಬ್ಬೆರಳನ್ನು, ಆ ಪ್ರಕಾರವಾಗಿಯೇ ಎಡ ಕೈಯಿಂದ ಬಲತೊಡೆಯಮೇಲಿರುವ ಎಡಭಾಗದ ಕಾಲಿನ ಹೆಬ್ಬೆರಳನ್ನು ಹಿಡಿದುಕೊಂಡು, ಎದೆಯಲ್ಲಿ ಗಡ್ಡವನ್ನಿರಿಸಿ ಭ್ರೂಮಧ್ಯದಲ್ಲಿ ದೃಷ್ಟಿಯನ್ನು ನಿಲ್ಲಿಸುವಿಕೆ.

(೪) **ಸಿದ್ಧಾಸನ**—ಎಡದ ಕಾಲಿನ ಹಿಮ್ಮಡಿಯನ್ನು ಮೂಲಾಧಾರದಲ್ಲಿಯೂ, ಬಲದ ಕಾಲಿನ ಹಿಮ್ಮಡಿಯನ್ನು ಲಿಂಗಸ್ಥಾನದಲ್ಲಿರಿಸಿ, ಶಿರಸ್ಸು, ಕಂಠ, ಭುಜ, ಇವುಗಳನ್ನು ಸರಿಯಾಗಿ ನಿಲ್ಲಿಸಿ ಭ್ರೂಮಧ್ಯವನ್ನು ನೋಡುವಿಕೆ.

(೫) **ಮತಾಂತರ ಸಿದ್ಧಾಸನ**—ಲಿಂಗದಮೇಲೆ ಎಡದ ಕಾಲಿನ ಹಿಮ್ಮಡಿಯನ್ನಿರಿಸಿ, ಅದರಮೇಲೆ ಬಲದ ಕಾಲಿನ ಹಿಮ್ಮಡಿಯನ್ನಿರಿಸಿ, ನಾಸಾಗ್ರವನ್ನು ನೋಡುತ್ತಾ ಇರುವಿಕೆ. ಇದನ್ನೇ ವಜ್ರಾಸನವೆಂದೂ, ಮುಕ್ತಾಸನವೆಂದೂ, ಗುಲ್ಫಾಸನವೆಂದೂ, ಹೇಳುವರು.

(೬) **ಸಿಂಹಾಸನ**—ಅಂಡಕೋಶಗಳ ಕೆಳಗಿನ ಪ್ರದೇಶಗಳಲ್ಲಿ ತೊಡೆಗಳ ಹಿಂಭಾಗಗಳು ತಗುಲುವ ಹಾಗೆ, ಬಲ ಮತ್ತು ಎಡದ ಹಿಮ್ಮಡಿಗಳನ್ನು ಬದಲಾಯಿಸಿಟ್ಟು ಬಲ ಮತ್ತು ಎಡಕೈಗಳ ಬೆರಳುಗಳನ್ನು ಮೊಣಕಾಲಿನ ಮೇಲೆ ಸವ್ಯವಾಗಿಯೂ ಅಗಲವಾಗಿರಿಸಿ, ದಿಟ್ಟವಾಗಿ ಕೂತುಕೊಂಡು ಬಾಯಿಯನ್ನು ತೆರೆದುಕೊಂಡು, ಭ್ರೂಮಧ್ಯದಲ್ಲಿ ಚಿದ್ಬಿಂದುವನ್ನು ನೋಡುತ್ತಿರುವಿಕೆಗೆ, ಸಿಂಹಾಸನವೆಂದು ಹೆಸರು.

(೭) **ಕುಕ್ಕುಟಾಸನ**—ಪದ್ಮಾಸನದಲ್ಲಿದ್ದು ಮೊಣಕಾಲುಗಳ ತೊಡೆಗಳ ಸಂದಿಯಲ್ಲಿ ಕೈಗಳನ್ನು ದೂರಿಸಿ, ಕೈಗಳನ್ನು ನೆಲಕ್ಕೆ ಊರಿ ಮೇಲಕ್ಕೆ ಹಾರಿದ ಹಾಗಿರುವಿಕೆ.

(೮) **ಭದ್ರಾಸನ**—ಅಂಡಕೋಶಗಳ ಕೆಳಗೆ ಸೀಳಿರುವ ಭಾಗದಿಂದ ಹಿಮ್ಮಡಿಗಳೆರಡನ್ನೂ ಎರಡು ಕೈಗಳಿಂದ ಹಿಡುದು ಕದಲದಿರುವಿಕೆ. ಇದನ್ನೇ ಗೋರಕ್ಷಾಸನವೆಂದೂ ಹೇಳುತ್ತಾರೆ.

(೯) **ಯೋಗಾಸನ**—ಹಂಸದಂಡವನ್ನು ಮೊಣಕಾಲುಗಳ ಕೆಳಗಿರಿಸಿಕೊಂಡು ಪಾದಗಳನ್ನು ನೆಲದಮೇಲಿರಿಸಿ, ತೊಡೆಗಳ ಸಂದಿಗಳಲ್ಲಿ ಕೈಗಳನ್ನಿರಿಸಿ, ಪಿರ್ರೆಗಳನ್ನು ಹಿಡಿದುಕೊಂಡು ಆತ್ಮಾವಲೋಕನೆಯನ್ನು ಮಾಡುತ್ತಾ ಇರುವಿಕೆ.

(೧೦) **ಕೂರ್ಮಾಸನ**—ಆಧಾರಕ್ಕೆ ಎರಡು ಪಕ್ಕೆಗಳಲ್ಲಿ ಎರಡು ಕಾಲುಗಳ ಹಿಮ್ಮಡಿಗಳನ್ನೇರಿಸಿ, ಎರಡು ಮೊಣಕಾಲುಗಳನ್ನು ಭೂಮಿಯಲ್ಲಿರಿಸಿ ದಿಟ್ಟತನದಿಂದ ಚೆನ್ನಾಗಿ ಕೂತುಕೊಳ್ಳುವಿಕೆ.

(೧೧) **ಗೋಮುಖಾಸನ**—ಎಡದಕಾಲಿನ ಹಿಮ್ಮಡಿ ಬಲದ ಬೆನ್ನಿನ ಕಡೆಗೂ, ಬಲದ ಕಾಲಿನ ಹಿಮ್ಮಡಿ ಎಡದ ಬೆನ್ನಿನ ಕಡೆಗೂ, ಮೊಣಕಾಲಿನ ಮೇಲೆ ಮೊಣಕಾಲನ್ನಿರಿಸಿ, ಪಾದಾಂಗುಷ್ಠಗಳನ್ನು ಕೈಗಳಿಂದ ಹಿಡಿದು ಶರೀರವನ್ನು ಚೆನ್ನಾಗಿ ನಿಲ್ಲಿಸಿ ಭ್ರೂಮಧ್ಯಾವಲೋಕನೆ ಮಾಡುವಿಕೆ.

(೧೨) **ಧನುರಾಸನ**—ಪಾದಾಂಗುಷ್ಠಗಳೆರಡನ್ನೂ ಎರಡು ಕೈಗಳಿಂದ ಧನುರಾಕಾರವಾಗಿ ಬೆನ್ನಿನ ಹಿಂದೆ ಕಿವಿಗಳಿಗೆ ಸರಿಯಾಗಿ ಹಿಡಿದುಕೊಂಡಿರುವಿಕೆ.

(೧೩) **ಕಪಾಲಾಸನ**—ತಲೆಕೆಳಕಾಗಿ ನಿಂತು ಭ್ರೂಮಧ್ಯೆಯಲ್ಲಿ ಚಿದ್ಬಿಂದುವನ್ನು ನೋಡುತ್ತಾ ಇರುವಿಕೆ.

ಇಲ್ಲಿ ಗೃಹಸ್ಥರಿಗೆ ಪದ್ಮಾಸನವು ಸಿದ್ಧಾಸನವೂ, ಉತ್ತಮವಾದರೂ, ಗೃಹಸ್ಥರಿಗೆ ಪದ್ಮಾಸನವೇ ಉತ್ತಮ. ಮಿಕ್ಕ ಆಶ್ರಮಸ್ಥರಿಗೆ ಸಿದ್ಧಾಸನ ಉತ್ತಮ. ಸಿದ್ಧಾಸನದಿಂದ ಇಂದ್ರಿಯನಿರೋಧವು, ಶರೀರದಾರ್ಢ್ಯವು, ನಿರ್ಮಲ ಚಿತ್ತವೃತ್ತಿ, ಇಂಥವುಗಳು ಹುಟ್ಟುತ್ತವೆ. ಮತಾಂತರ ಸಿದ್ಧಾಸನವು ಸಮಸ್ತಾಸನಗಳಲ್ಲಿಯೂ, ಉತ್ತಮವಾದದ್ದು. ಇದು ಮುಕ್ತಿದ್ವಾರಕವಾಟಪಾಟನಕ್ಕೆ ಯೋಗ್ಯವಾದದ್ದು. ಕಪಾಲಾಸನವನ್ನು ಪ್ರತಿನಿತ್ಯವೂ, ಒಂದು ಜಾವದ ಹೊತ್ತು ಅಭ್ಯಾಸಮಾಡುತ್ತಾ ಇದ್ದರೆ, ಮೂರು ತಿಂಗಳಾದ ಮೇಲೆ ಜರಾರಹಿತನೂ, ಮೃತ್ಯುಂಜಯನೂ, ಆಗುತ್ತಾನೆ. [ಇನ್ನೂ ಅನೇಕಾಸನಗಳಿವೆ. ಅವುಗಳನ್ನು ಹಠಯೋಗ ಪ್ರದೀಪಿಕೆಯಲ್ಲಿ ನೋಡಬಹುದು.]

**ಅ॥ ಇಷ್ಟಾಸನಸಿದ್ಧಿಗೆ ಉಪಾಯವನ್ನು ಹೇಳುತ್ತಾರೆ.**

೪೭. ಸೂ॥ ಪ್ರಯತ್ನ ಶೈಥಿಲ್ಯಾನನ್ತ ಸಮಾಪತ್ತಿ ಭ್ಯಾಮ್ ॥

ತಾ॥ ಆಸನವನ್ನು ಅಭ್ಯಾಸಮಾಡದೆ ಯಿದ್ದರೂ, ತನಗೆ ಆಸನವು ಸಿದ್ಧಿಸಬೇಕೆಂದು ಸದಾ ನೆನೆಪಿನಲ್ಲಿದ್ದರೆ ಸುಲಭವಾಗಿ ಸಿದ್ಧಿಸುತ್ತದೆ.

ವಿ॥ ತಾನು ಕೋರಿದ ಆಸನವನ್ನು ಕ್ರಮ ಕ್ರಮವಾಗಿ ಅಭ್ಯಾಸ ಮಾಡದೆ ಹೋದರೂ, ತಾನು ಕೋರಿದ ಆಸನವನ್ನು ಅವಿಚ್ಛಿನ್ನವಾಗಿ ಜ್ಞಾಪಕ ದಲ್ಲಿದ್ದರೆ ತನ್ನಿಷ್ಟಕ್ಕೆ ಸಿದ್ಧಿಸುತ್ತದೆ. ಆದರೂ ಅವರವರ ಶಕ್ತಿಗೆ ತಕ್ಕ ಆಸನವನ್ನು ಅಭ್ಯಾಸಮಾಡುವುದಕ್ಕೆ ಪ್ರಯತ್ನಿಸುವುದೇ ಒಳ್ಳೆಯದು.

**ಅ॥ ಆಸನ ಸಿದ್ಧಿಯ ಫಲವನ್ನು ಬೋಧಿಸುತ್ತಾರೆ.**

೪೮. ಸೂ॥ ತತೋ ದ್ವನ್ದ್ವಾ ಽನಭಿಘಾತಃ ॥

ತಾ॥ ಆಸನವು ಸಿದ್ಧಿಸಿದ ಮೇಲೆ, ಶೀತೋಷ್ಣಾದಿ ದ್ವಂದ್ವಗಳಿಂದ ಬಾಧೆಯನ್ನು ಹೊಂದಲಾರನು.

ವಿ॥ ತಾನು ಕೋರಿದ ಆಸನವು ಸಿದ್ಧಿಸಿದ ಮೇಲೆ, ಶೀತೋಷ್ಣಕ್ಷುತ್ಪಿಪಾಸಾದಿ ದ್ವಂದ್ವಗಳು ಬಾಧಿಸುವುದಿಲ್ಲ.

**ಅ॥ ಆಸನ ಸಿದ್ಧ್ಯನಂತರ ಮಾಡಬೇಕಾದ ಪ್ರಾಣಾಯಾಮವನ್ನು ಹೇಳುತ್ತಾರೆ.**

೪೯. ಸೂ॥ ತಸ್ಮಿನ್ ಸತಿ ಶ್ವಾಸ ಪ್ರಶ್ವಾಸಯೋರ್ಗತಿ
ವಿಚ್ಛೇದಃ ಪ್ರಾಣಾಯಾಮಃ ॥

ತಾ॥ ಆಸನ ಸಿದ್ಧಿಯಾದಮೇಲೆ ಉಚ್ಛ್ವಾಸ ನಿಶ್ವಾಸಗಳಗಮನಾಗಮನಗಳ ನಿರೋಧಿಸತಕ್ಕದ್ದೇ ಪ್ರಾಣಾಯಾಮವೆನ್ನಲ್ಪಡುವುದು.

ವಿ॥ ಶ್ವಾಸೆಯನ್ನು ಬಿಡುವುದು, ಶ್ವಾಸೆಯನ್ನು ತೆಗೆದುಕೊಳ್ಳುವುದು ಕ್ಲ್ಪಪ್ತಪ್ರಕಾರ ಮಾಡಬೇಕೆಂದು ತಿಳಿಯಬೇಕು.

**ಅ॥ ಪ್ರಾಣಾಯಾಮ ವಿಭಾಗಾದಿ ವಿಶೇಷವನ್ನು ಹೇಳುತ್ತಾರೆ.**

೫೦. ಸೂ॥ ಸತು ಬಾಹ್ಯಾಭ್ಯನ್ತರ ಸ್ತಮ್ಭವೃತ್ತಿರ್ದೇಶ
ಕಾಲ ಸಂಖ್ಯಾಭಿಃ ಪರಿದೃಷ್ಟೋ ದೀರ್ಘ ಸೂಕ್ಷ್ಮಃ ॥

ತಾ॥ ಪ್ರಾಣಾಯಾಮವೆನ್ನುವುದು ಮೂರು ವಿಧ. ಶ್ವಾಸೆಯನ್ನು ಈಚೆಗೆ ಬಿಡುವುದು ರೇಚಕ ಪ್ರಾಣಾಯಾಮವೆಂದೂ, ಶ್ವಾಸೆಯನ್ನು

ಒಳಕ್ಕೆ ತೆಗೆದುಕೊಳ್ಳುವಿಕೆ ಪೂರಕ ಪ್ರಾಣಾಯಾಮವೆಂದೂ, ಶ್ವಾಸೆಯನ್ನು ಒಳಗೇನೆ ನಿಲ್ಲಿಸಿರುವಿಕೆ ಕುಂಭಕ ಪ್ರಾಣಾಯಾಮವೆಂದೂ ಹೆಸರು. ಇದು ದೇಶದಿಂದಲೂ, ಕಾಲದಿಂದಲೂ, ಸಂಖ್ಯೆಯಿಂದಲೂ, ದೀರ್ಘದಿಂದಲೂ, ಸೂಕ್ಷ್ಮದಿಂದಲೂ, ನಿಯಮಿತವಾಗಿದೆ.

(೧) ವಿ|| ಮೂಗಿನ ೧೨ ಅಂಗುಲದವರೆಗೂ ಶ್ವಾಸೆಯನ್ನು ಬಿಡುವುದಕ್ಕೆ ದೇಶಕ್ಲ್ಪಪ್ತವೆಂದು ಹೆಸರು.

(೨) ಶ್ವಾಸೆಯನ್ನು ೧೬ ಮಾತ್ರೆಗಳಕಾಲ ರೇಚಕವನ್ನು ೩೨ ಮಾತ್ರೆಗಳ ಕಾಲ ಪೂರಕವನ್ನು, ೬೪ ಮಾತ್ರೆಗಳ ಕಾಲ ಕುಂಭಕವನ್ನು ಮಾಡುವುದಕ್ಕೆ ಕಾಲ ಕ್ಲಿಪ್ತವೆಂದು ಹೆಸರು.

(೩) ಈ ರೇಚಕ ಪೂರಕ ಕುಂಭಕಗಳನ್ನು ಪ್ರತಿದಿನವು ಇಷ್ಟುಸಾರಿಯೆಂದು ಲೆಕ್ಕವಿಡುವುದಕ್ಕೆ ಸಂಖ್ಯಾಕ್ಲ್ಪಪ್ತವೆಂದು ಹೆಸರು.

(೪) ಮೂಗಿನಿಂದ ೧೬ ಅಂಗುಲದವರೆಗೂ ಶ್ವಾಸೆಯನ್ನು ಬಿಡುವುದಕ್ಕೆ ದೇಶದೀರ್ಘವೆಂದು ಹೆಸರು.

(೫) ಶ್ವಾಸೆಯನ್ನು ೨೯ ಮಾತ್ರೆಗಳ ಕಾಲ ರೇಚಕ ಮಾಡುವುದಕ್ಕೆ ಕಾಲದೀರ್ಘವೆಂದು ಹೆಸರು.

(೬) ರೇಚಕಾದಿಗಳನ್ನು ತಾನು ನಿರ್ಣಯಿಸಿಕೊಂಡಿರುವ ಲೆಕ್ಕಕ್ಕಿಂತಲೂ ಹೆಚ್ಚಾಗಿ ಮಾಡುವಿಕೆ ಸಂಖ್ಯಾದೀರ್ಘವೆಂತಲೂ ಹೆಸರು.

(೭) ತನ್ನಕ್ಲ್ಪಪ್ತಕ್ಕಿಂತಲೂ ಹೆಚ್ಚಾಗಿ ಮಾಡುವಿಕೆಗೆ ದೀರ್ಘವೆಂತಲೂ ಹೆಸರು.

(೮) ತನ್ನಕ್ಲ್ಪಪ್ತಕ್ಕಿಂತಲೂ ಕಮ್ಮಿಯಾಗಿ ಮಾಡುವಿಕೆಗೆ ಸೂಕ್ಷ್ಮವೆಂತಲೂ, ಹೆಸರು. ಮತ್ತು ಇದಕ್ಕೆ ವೈಕೃತ ಪ್ರಾಣಾಯಾಮವೆಂದೂ ಹೆಸರು.

**ಅ|| ತ್ರಿವಿಧ ಪ್ರಾಣಾಯಾಮಗಳನ್ನು ಹೇಳಿ, ಚತುರ್ಥ ಪ್ರಾಣಾಯಾಮ ಲಕ್ಷಣವನ್ನು ಹೇಳುತ್ತಾರೆ.**

೫೧. ಸೂ|| ಬಾಹ್ಯಾಭ್ಯನ್ತರ ವಿಷಯಾಕ್ಷೇಪೀ ಚತುರ್ಥಃ ||

ತಾ|| ಬಾಹ್ಯಾಭ್ಯಂತರ ವಿಷಯಗಳಾದ ರೇಚಕ ಪೂರಕಗಳನ್ನು ಬಿಡುವುದಕ್ಕೆ ಚತುರ್ಥ ಪ್ರಾಣಾಯಾಮವೆಂದರೆ ಹೆಸರು.

ವಿ|| ರೇಚಕ ಪೂರಕಗಳನ್ನು ಬಿಟ್ಟು, ಕುಂಭಕದಲ್ಲಿ ಮಾತ್ರವಿರುವಿಕೆಗೆ ಚತುರ್ಥ ಪ್ರಾಣಾಯಾಮವೆಂದು ಹೆಸರು. ಇದಕ್ಕೆ ಕೇವಲ ಕುಂಭಕವೆಂದು ಹೆಸರಿದೆ. ಇದೇ ಯೋಗಾಂಗವಾಗಿದೆ.

**ಅ|| ಪ್ರಾಣಾಯಾಮ ಪ್ರಯೋಜನವನ್ನು ಹೇಳುತ್ತಾರೆ.**

೫೨. ಸೂ|| ತತಃ ಕ್ಷೀಯತೇ ಪ್ರಕಾಶಾವರಣಮ್ ||

ತಾ|| ಪ್ರಾಣಾಯಾಮವನ್ನು ಮಾಡುವುದರಿಂದ ಚಿತ್ತದಲ್ಲಿ ಸಾತ್ತ್ವಿಕಭಾವವನ್ನು ಆವರಿಸಿಕೊಂಡಿರುವ ಮಲಿನವು ನಾಶವಾಗುತ್ತದೆ.

ವಿ|| ಚಿತ್ತದ ಸಾತ್ತ್ವಿಕಭಾಗವನ್ನು ಸುತ್ತಿಕೊಂಡು ಪಾಪವನ್ನು ಮಾಡುವಹಾಗೆ ಪ್ರೇರೇಪಿಸತಕ್ಕ ಮಲಿನವು, ಪ್ರಾಣಾಯಾಮದಿಂದ ನಿವರ್ತಿಸುತ್ತದೆ.

**ಅ|| ಪ್ರಾಣಾಯಾಮದ ವಿಶೇಷ ಪ್ರಯೋಜನವನ್ನು ಹೇಳುತ್ತಾರೆ.**

೫೩. ಸೂ|| ಧಾರಣಾಸು ಯೋಗ್ಯತಾ ಮನಸಃ ||

ತಾ|| ಧಾರಣೆಯಲ್ಲಿ ಚಿತ್ತಕ್ಕೆ ಸ್ಥೈರ್ಯವು ಹುಟ್ಟುತ್ತದೆ.

ವಿ|| ಪ್ರಾಣಾಯಾಮದಿಂದ ನಿರ್ಮಲವಾದ ಚಿತ್ತವನ್ನು ಎಲ್ಲಿ ನಿಲ್ಲಿಸಿದರೆ ಅಲ್ಲಿ ನಿಲ್ಲುವ ಶಕ್ತಿ ಹುಟ್ಟಿದ ಮೇಲೆ, ಇನ್ನು ಮುಂದೆ ಹೇಳತಕ್ಕ ಧಾರಣೆಯಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲುವುದು. [ಪ್ರಾಣಾಯಾಮದ ಲಕ್ಷಣವನ್ನು ವಿಸ್ತಾರವಾಗಿ ಹಠಯೋಗ ಪ್ರದೀಪಿಕೆಯಲ್ಲಿ ನೋಡಬಹುದು.]

**ಅ|| ಪ್ರತ್ಯಾಹಾರ ಲಕ್ಷಣವನ್ನು ಹೇಳುತ್ತಾರೆ.**

೫೪. ಸೂ|| ಸ್ವವಿಷಯಾ ಸಂಪ್ರಯೋಗೇ ಚಿತ್ತಸ್ವರೂಪಾನು
ಕಾರ ಇವೇನ್ದ್ರಿಯಾಣಾಂ ಪ್ರತ್ಯಾಹಾರಃ ||

ತಾ|| ಇಂದ್ರಿಯಗಳನ್ನು ತಮ್ಮ ತಮ್ಮ ವಿಷಯಗಳಲ್ಲಿ ಹೋಗಗೊಳಿಸದೆ, ನಿರ್ಮಲವಾದ ಚಿತ್ತಕ್ಕೆ ತಿರುಗಿಸಿ, ತಮ್ಮ ತಮ್ಮ ಸ್ಥಳಗಳಲ್ಲಿ ನಿಲ್ಲಿಸುವುದೇ ಪ್ರತ್ಯಾಹಾರ.

ವಿ|| ಚಕ್ಷುರಾದೀಂದ್ರಿಯಗಳು ತಮ್ಮ ತಮ್ಮ ವಿಷಯಗಳಾದ ರೂಪಾವಿಷಯಗಳಿಂದ ಚಿತ್ತದಲ್ಲಿ ಐಕ್ಯವಾಗುವ ಹಾಗೆ ಮಾಡುವುದಕ್ಕೆ ಪ್ರತ್ಯಾಹಾರವೆನ್ನಲ್ಪಡುವುದು.

**ಅ|| ಪ್ರತ್ಯಾಹಾರದ ಫಲವನ್ನು ಹೇಳುತ್ತಾರೆ.**

೫೫. ಸೂ|| ತತಃ ಪರಮಾವಶ್ಯತೇನ್ದ್ರಿಯಾಣಾಮ್ ||

ತಾ|| ಪ್ರತ್ಯಾಹಾರಾಭ್ಯಾಸದಿಂದ ಇಂದ್ರಿಯಗಳು ಸ್ವಾಧೀನವಾಗುತ್ತದೆ.

ವಿ|| ಪ್ರತ್ಯಾಹಾರವು ಸಿದ್ಧಿಸಿದ ಯೋಗಿಗೆ ಇಂದ್ರಿಯಗಳು ವಶವಾಗಿರುತ್ತವೆ. ಇಂದ್ರಿಯವ್ಯಾಪಾರಗಳು ವಶವಾದಮೇಲೆ ಚಿತ್ತಚಾಂಚಲ್ಯವಿಲ್ಲದೆ ಹೋಗುವುದು. ಆದ್ದರಿಂದ ಧ್ಯಾನದಲ್ಲಿ ಚಿತ್ತವು ಸ್ಥಿರವಾಗಿ ನಿಲ್ಲುತ್ತದೆ.

ಪಾತಂಜಲಿ ಯೋಗಸೂತ್ರಗಳಲ್ಲಿ ಸಾಧನಪಾದವು ಸಮಾಪ್ತ.



# ವಿಭೂತಿಪಾದ

ಶ್ಲೋ॥ ಯತ್ಪಾದಪದ್ಮ ಸ್ಮರಣಾ ದಣಿಮಾದಿ ವಿಭೂತಯಃ।
ಭವನ್ತಿ ಭಾವಿನಾ ಮಸ್ತು ಭೂತನಾಥ ಸ್ಸಭೂತಯೇ॥

**ಅ॥ ಧಾರಣಾಲಕ್ಷಣವನ್ನು ಹೇಳುತ್ತಾರೆ.**

೧. ಸೂ॥ ದೇಶಬನ್ಧ ಶ್ಚಿತ್ತಸ್ಯ ಧಾರಣಾ ॥

ತಾ॥ ನಾಭಿಚಕ್ರಾದಿ ಪ್ರದೇಶಗಳಲ್ಲಿ ಚಿತ್ತವನ್ನು ಚಲಿಸದೆ ನಿಲ್ಲಿಸುವುದಕ್ಕೆ ಧಾರಣೆಯೆನ್ನಲ್ಪಡುವುದು.

ವಿ॥ ಯೋಗವನ್ನು ಅಭ್ಯಾಸ ಮಾಡತಕ್ಕವರು ಅಭ್ಯಾಸನಿಮಿತ್ತವಾಗಿ ಯಾವುದಾದರೂ ಒಂದು ವಸ್ತುವಿನಲ್ಲಿಯಾಗಲಿ, ಒಂದು ಸ್ಥಳದಲ್ಲಿಯಾಗಲಿ ಚಿತ್ತವನ್ನು ನಿಲ್ಲಿಸಬೇಕು. ಹಾಗೆ ನಿಲ್ಲಿಸಿದರೆ ಚಿತ್ತಕ್ಕೆ ಚಲನೆ ಹುಟ್ಟುವುದಿಲ್ಲ. ಅಂಥ ಸ್ಥಿತಿಗೆ "ಧಾರಣ"ಯೆನ್ನಲ್ಪಡುವುದು.

ಎರಡನೆಯ ಪಾದದಲ್ಲಿ ಸಂಗ್ರಹವಾಗಿ ಹೇಳಿದ ಧಾರಣಾದಿ ಅಂಗತ್ರಯಗಳನ್ನು ನಿರೂಪಿಸುವುದಕ್ಕೋಸ್ಕರವೂ, ಮತ್ತು ಸಂಯಮಾದಿಗಳನ್ನು ಬೋಧಿಸಬೇಕೆಂಬ ಉದ್ದೇಶ್ಯದಿಂದ ಈ ಪಾದದಲ್ಲಿ ಪುರ್ವೋಕ್ತ ಧಾರಣಾದಿ ಪ್ರಯೋಜನ ವಿಶೇಷವನ್ನು ಅಂದರೆ ಬಾಹ್ಯಾಭ್ಯಂತರ ಸಿದ್ಧಿಗಳನ್ನು ಕ್ರಮವಾಗಿ ಹೇಳುವುದಕ್ಕೆ ನಿಶ್ಚಯಿಸಿದರೆಂದು ತಿಳಿಯಬೇಕು.

**ಅ॥ ಧ್ಯಾನಕ್ರಮವನ್ನು ನಿರೂಪಿಸುತ್ತಾರೆ.**

೨. ಸೂ॥ ತತ್ರ ಪ್ರತ್ಯಯೈಕ ತಾನತಾ ಧ್ಯಾನಮ್ ॥

ತಾ॥ ಧಾರಣಾಸ್ಥಳದಲ್ಲಿ ಜ್ಞಾನದ ಧ್ಯಾನೇತರ ವಸ್ತುಗಳನ್ನು ಚಿತ್ತಕ್ಕೆ ಬಾರದೆ ಮಾಡುವುದೇ ಧ್ಯಾನವೆನ್ನಲ್ಪಡುವುದು.

ವಿ॥ ಧಾರಣೆಯ ಸ್ಥಳದಲ್ಲಿ ತಾನು ಧ್ಯಾನಿಸತಕ್ಕ ವಸ್ತುವುಗಿಂತ ವ್ಯತಿರಿಕ್ತವಾದದ್ದನ್ನು ಬರಗೊಳಿಸದೆ. ತಾನು ಧ್ಯಾನಿಸತಕ್ಕ ವಸ್ತುವನ್ನು ಮಾತ್ರವೇ ಭಾವಿಸುವುದಕ್ಕೆ ಧ್ಯಾನವೆಂದು ಹೆಸರು. ಅಂದರೆ ಧಾರಣೆಯಲ್ಲಿ ಬುದ್ಧಿಯನ್ನಿರಿಸಿ ಮರೆಯದೆ ಯಿರುವಿಕೆ.

**ಅ॥ ಸಮಾಧಿಯ ಲಕ್ಷಣವನ್ನು ಹೇಳುತ್ತಾರೆ.**

೩. ಸೂ॥ ತದೇ ವಾತ್ಮಮಾತ್ರ ನಿರ್ಭಾಸಂ ಸ್ವರೂಪ
ಶೂನ್ಯಮಿವ ಸಮಾಧಿಃ ॥

ತಾ॥ ಮುಂದೆ ಹೇಳಿದ ಧ್ಯಾನವು ಧ್ಯಾನಿಸುವ ವಸ್ತುವಿನ ಸ್ವರೂಪವಾಗಿ ಆ ಧ್ಯಾನವಿಲ್ಲದೆ ಇರುವುದೇ ಸಮಾಧಿಯೆನ್ನಲ್ಪಡುವುದು.

ವಿ॥ ಧ್ಯಾನವು—ಧ್ಯಾನಿಸುವ ವಸ್ತುವಿನ ಸ್ವರೂಪವಾಗಿ ಪರಿಣಮಿಸಿ, ನಾನು ಧ್ಯಾನಿಸುತ್ತಾ ಇಧೇನೆಂಬುದು ಕೂಡ ಮರೆತು ಹೋಗುವುದಕ್ಕೆ ಸಮಾಧಿಯೆಂದು ಹೆಸರು.

**ಅ॥ ಯೋಗಾಂಗ ತ್ರಯದ ಸಂಕೇತ ನಾಮಗಳನ್ನು ಹೇಳುತ್ತಾರೆ.**

೪. ಸೂ॥ ತ್ರಯ ಮೇಕತ್ರ ಸಂಯಮಃ ॥

ತಾ॥ ಒಂದೇ ವಿಷಯದಲ್ಲಿ ಧಾರಣ, ಧ್ಯಾನ, ಸಮಾಧಿಗಳೆಂಬ ಈ ಮೂರು ಕೂಡಿರುವಿಕೆಗೆ ಸಂಯಮವೆಂದು ಹೆಸರು.

ವಿ॥ ಧಾರಣಾಧ್ಯಾನ ಸಮಾಧಿಗಳು ಕೂಡಿರುವುದಕ್ಕೆ ಸಂಯಮವೆಂದು ಹೆಸರು. ಈ ಮೂರು ಯೋಗಕ್ಕೆ ಅಂತರಂಗ ಸಾಧನೆಗಳಾಗಿವೆ.

**ಅ॥ ಸಂಯಮ ಸಿದ್ಧಿಯ ಫಲವನ್ನು ನಿರೂಪಿಸುತ್ತಾರೆ.**

೫. ಸೂ॥ ತಜ್ಜಯಾ ತ್ಪ್ರಜ್ಞಾಲೋಕಃ ॥

ತಾ॥ ಸಂಯಮದ ಅಭ್ಯಾಸವು ಸ್ಥಿರವಾಗುವುದರಿಂದ ತಿಳಿಯತಕ್ಕ ಸ್ವರೂಪವು ತಿಳಿಯುತ್ತದೆ.

ವಿ॥ ಸಂಯಮವನ್ನು ಚೆನ್ನಾಗಿ ಅಭ್ಯಾಸಮಾಡಿರತಕ್ಕವನಿಗೆ ತಾನು ನೋಡಲ್ಪಡತಕ್ಕ ಸಕಲ ವಸ್ತು ಸ್ವರೂಪವು ಚೆನ್ನಾಗಿ ಕಾಣಿಸುತ್ತದೆ. ಅಂದರೆ ಇದು ದೃಢವಾದರೆ ಯಾವ ವಸ್ತುವು ಕೂಡ ಅಡ್ಡಿಯಿಲ್ಲದೆ ಗೋಚರವಾಗುತ್ತದೆಂದು ಭಾವವು.

**ಅ॥ ಸಂಯಮವನ್ನು ಉಪಯೋಗಿಸುವ ಪದ್ಧತಿಯನ್ನು ಬೋಧಿಸುತ್ತಾರೆ.**

೬. ಸೂ॥ ತಸ್ಯ ಭೂಮಿಷು ವಿನಿಯೋಗಃ ॥

ತಾ॥ ಆ ಸಂಯಮವನ್ನು ಚಿತ್ತದ ಸ್ಥೂಲಾದಿ ಭೂಮಿಕೆಗಳಲ್ಲಿ ಕ್ರಮವಾಗಿ ಅಭ್ಯಾಸ ಮಾಡುತ್ತಾ ಇರಬೇಕು. ಹಾಗೆ ಮಾಡದೆ ಇರುವುದರಿಂದ ಸಂಯಮಗಳಿಂದಾಗುವ ಪ್ರಯೋಜನಗಳನ್ನು ಹೊಂದಲಾರನು.

**ಅ|| ಸಾಧನಪಾದದಲ್ಲಿ ಯೋಗದ ಐದಂಗಗಳನ್ನು ಹೇಳಿ ಮಿಕ್ಕ ಮೂರು ಅಂಗಗಳನ್ನು ಹೇಳದೆಯಿರುವುದಕ್ಕೆ ಕಾರಣವನ್ನು ಹೇಳುತ್ತಾರೆ.**

೭. ಸೂ|| ತ್ರಯ ಮಂತರಂಗಂ ಪೂರ್ವೇಭ್ಯಃ ||

ತಾ|| ಯಮಾದಿ ಐದಂಗಗಳಿಗಿಂತಲೂ, ಧಾರಣಾದಿ ಮೂರು ಅಂಗಗಳು ಸಂಪ್ರಜ್ಞಾತ ಸಮಾಧಿಗೆ ಅಂತರಂಗಗಳು.

ವಿ|| ಪರಂಪರೆಯಾಗಿ ಸಮಾಧಿಗೆ ಉಪಯುಕ್ತಗಳಾದ ಯಮಾದಿ ಐದು ಅಂಗಗಳು ಸಂಪ್ರಜ್ಞಾತ ಸಮಾಧಿಯ ಬಾಹ್ಯಾಂಗಗಳೆಂದೂ, ಧಾರಣಾದಿ ಮೂರು ಅಂಗಗಳೂ ಸಂಪ್ರಜ್ಞಾತ ಸಮಾಧಿಯ ಅಂತರಂಗಳೆಂದೂ, ತಿಳಿಯಬೇಕು.

ಮತ್ತು ಯೋಗಾಂಗಗಳ ಎಂಟನ್ನೂ ಎರಡನೆಯ ಪಾದದಲ್ಲಿ ವಿವರಿಸಿ ಅದರಲ್ಲಿ ಐದು ಅಂಗಗಳ ಲಕ್ಷಣವನ್ನು ಅದೇ ಪಾದದಲ್ಲಿ ಹೇಳಿ ಮಿಕ್ಕ ಮೂರು ಅಂಗಗಳನ್ನು ಹೇಳದೆ ಇರುವುದಕ್ಕೆ ಕಾರಣವೇನಂದರೆ, ಈ ಮೂರನೇಯ ಪಾದದಲ್ಲಿ ಯೋಗದ ದೃಢೀಕರಣವನ್ನು ಹೇಳುವುದರಿಂದ ಇಲ್ಲಿ ಅವುಗಳನ್ನು ಹೇಳುತ್ತಾರೆಂದು ಗ್ರಹಿಸಬೇಕು.

**ಅ|| ಧಾರಣಾದಿ ಮೂರು ಅಂಗಗಳು ನಿರ್ಬೀಜ ಸಮಾಧಿಗೆ ಬಹಿರಂಗಗಳೆಂದು ಹೇಳುತ್ತಾರೆ.**

೮. ಸೂ|| ತದಪಿ ಬಹಿರಙ್ಗಂ ನಿರ್ಬೀಜಸ್ಯ ||

ತಾ|| ಅಸಂಪ್ರಜ್ಞಾತ ಸಮಾಧಿಗೆ ಧಾರಣಾದಿ ಮೂರೂ ಬಹಿರಂಗೆಗಳು.

ವಿ|| ಧಾರಣಾದಿಗಳು ನಿರ್ಬೀಜ ಸಮಾಧಿಗೆ ಅಂದರೆ ನಿರಾಲಂಬನ ರೂಪವಾದ ಅಸಂಪ್ರಜ್ಞಾತ ಸಮಾಧಿಗೆ ಬಹಿರಂಗವಾದ್ದರಿಂದ, ಸಂಯಮಕ್ಕೆ ಉಪಯುಕ್ತವಾದ "ಸಮಾಧಿ" ಸಬೀಜವೆನ್ನಲ್ಪಡುತ್ತದೆ.

**ಅ|| ಯೋಗಸಿದ್ಧಿಯನ್ನು ಹೇಳಲುಪಕ್ರಸಿ ಪ್ರಥಮದಲ್ಲಿ ನಿರೋಧ ಪರಿಣಾಮವನ್ನು ಹೇಳುತ್ತಾರೆ.**

೯. ಸೂ|| ವ್ಯುತ್ಥಾನ ನಿರೋಧ ಸಂಸ್ಕಾರಯೋರಭಿಭವ ಪ್ರಾದುರ್ಭಾವೌ ನಿರೋಧಲಕ್ಷಣ ಚಿತ್ತಾನ್ವಯೋ ನಿರೋಧ ಪರಿಣಾಮಃ ||

ತಾ|| ಚಿತ್ತಕ್ಕೆ ಭೂಮಿಕೆಗಳಾದ ಕ್ಷಿಪ್ತ, ಮೂಢ, ವಿಕ್ಷಿಪ್ತ, ಏಕಾಗ್ರ, ನಿರುದ್ಧಗಳೆಂಬ ಈ ಐದರಲ್ಲಿ ಕ್ಷಿಪ್ತ, ಮೂಢ, ವಿಕ್ಷಿಪ್ತಗಳು ಮೂರೂ ವ್ಯುತ್ಥಾನವೆಂದೂ, ಏಕಾಗ್ರ, ನಿರುದ್ಧ ಭೂಮಿಕೆಗಳು ಎರಡೂ ನಿರೋಧವೆಂದೂ ತಿಳಿಯತಕ್ಕದ್ದು. ಅಂದರೆ ಈ ವ್ಯುತ್ಥಾನ ನಿರೋಧಗಳಿಂದ ಹುಟ್ಟಿದ ವಾಸನೆಗಳಲ್ಲಿ ವ್ಯುತ್ಥಾನ ವಾಸನಾ ತಿರಸ್ಕಾರವು ನಿರೋಧ ಸಂಸ್ಕಾರದ ಆವಿರ್ಭಾವವೆಂದೂ; ಆ ನಿರೋಧ ಸಂಸ್ಕಾರದ ಪ್ರಾರಂಭದಲ್ಲಿರುವ ಚಿತ್ತಕ್ಕೆ ನಿರೋಧ ಪರಿಣಾಮವೆಂದೂ ಭಾವವು.

(೧) ವಿ|| ಚಿತ್ತದಲ್ಲಿ ರಜೋ ಗುಣೋದ್ರೇಕದಿಂದ ಬಹಿರ್ಮುಖವಾಗಿ ಸುಖ ದುಃಖಾದಿಗಳಲ್ಲಿ ಪ್ರೇರೇಪಿಸಲ್ಪಟ್ಟು ಚಂಚಲವಾಗಿರುವ ಚಿತ್ತದ ಸ್ಥಿತಿ ಕ್ಷಿಪ್ತವು.

(೨) ಚಿತ್ತದಲ್ಲಿ ತಮೋಗುಣೋದ್ರೇಕದಿಂದ ಕೃತ್ಯಾಕೃತ್ಯ ವಿವೇಕವಿಲ್ಲದೆ, ಕ್ರೋಧಾದಿಗಳಿಂದ ವಿರುದ್ಧ ಕಾರ್ಯಗಳಲ್ಲಿ ಪ್ರವರ್ತಿಸಿ ಸುಖಮಯವಾಗಿರುವ ಚಿತ್ತದ ಸ್ಥಿತಿ ಮೂಢವು.

(೩) ಚಿತ್ತವು ಸತ್ತ್ವ ಗುಣೋದ್ರೇಕದಿಂದ ಸುಖಸಾಧನೆಗಳಾದ ವಿಷಯಗಳಲ್ಲಿ ಪ್ರವರ್ತಿಸಿ ಸುಖಮಯವಾಗಿರುವ ಚಿತ್ತದ ಸ್ಥಿತಿ ವಿಕ್ಷಿಪ್ತವು.

(೪) ಚಿತ್ತದಲ್ಲಿ ಸತ್ತ್ವಗುಣವಧಿಕವಾಗಿ ಬಾಹ್ಯದಲ್ಲಿ ಪ್ರಸರಿಸದೆ ಇರುವ ಚಿತ್ತದ ಸ್ಥಿತಿ ಏಕಾಗ್ರವು.

(೫) ಚಿತ್ತದಲ್ಲಿ ಸತ್ತ್ವಗುಣೋತ್ಕರ್ಷದಿಂದ ಆನಂದವಾಗಿರುವ ಚಿತ್ತದ ಸ್ಥಿತಿಗೆ ನಿರುದ್ಧವು. ಎಂದು ಹೆಸರು.

ಇದರಲ್ಲಿ ಮೊದಲು ಮೂರು ಭೂಮಿಕೆಗಳು ಸಮಾಧಿಗೆ ಉಪಯುಕ್ತಗಳಲ್ಲ ಮಿಕ್ಕ ಎರಡು ಭೂಮಿಕೆಗಳು ಸಮಾಧಿಗೆ ಉಪಯುಕ್ತಗಳು. (ಈ ವಿಷಯವನ್ನು ೧-ನೇ ಪಾದದ ೨-ನೇ ಸೂತ್ರದಲ್ಲಿ ನೋಡಬಹುದು.

**ಅ|| ನಿರೋಧ ಪರಿಣಾಮವನ್ನು ಹೊಂದಿದ ಚಿತ್ತಕ್ಕೆ ಆಗುವ ಫಲವನ್ನು ಹೇಳುತ್ತಾರೆ.**

೧೦. ಸೂ|| ತಸ್ಯ ಪ್ರಶಾನ್ತ ವಾಹಿತಾ ಸಂಸ್ಕಾರಾತ್ ||

ತಾ|| ನಿರೋಧ ಪರಿಣಾಮವನ್ನು ಹೊಂದಿದ ಚಿತ್ತಕ್ಕೆ ಅನಿರೋಧ ಪರಿಣಾಮ ಸಂಸ್ಕಾರ ಬಲದಿಂದ ಕೇವಲ ಸತ್ತ್ವಗುಣ ಪ್ರವಾಹವು ಹುಟ್ಟುತ್ತದೆ.

ವಿ|| ನಿರೋಧ ಪರಿಣಾಮ ಬಲದಿಂದ ಚಿತ್ತದ ಕ್ಲೇಶಗಳಿಂದಾಗುವ ಚಂಚಲವು ನಶಿಸಿ ಕೇವಲ ಸತ್ತ್ವಗುಣ ಸಮಾನವಾದ ಸಜಾತೀಯ ಸತ್ತ್ವೋತ್ಕೃಷ್ಟ ಪ್ರವಾಹವು ಹುಟ್ಟುತ್ತದೆ.

**ಅ|| ಸಮಾಧಿಯ ಪರಿಣಾಮನ್ನು ನಿರೂಪಿಸುತ್ತಾರೆ.**

೧೧. ಸೂ|| ಸರ್ವಾರ್ಥೈಕಾಗ್ರತಯೋಃ ಕ್ಷಯೋದಯಾ
ಚಿತ್ತಸ್ಯ ಸಮಾಧಿ ಪರಿಣಾಮಃ ||

ತಾ|| ಅನೇಕ ವಿಷಯಗಳಲ್ಲಿ ಪರಿಣಮಿಸುವ ಚಿತ್ತದ ಧರ್ಮವು ಸರ್ವಾರ್ಥತೆಯೆನ್ನಲ್ಪಡುವುದು.

ಒಂದೇ ವಿಷಯದಲ್ಲಿ ಪರಿಣಮಿಸುವ ಚಿತ್ತಧರ್ಮವು ಏಕಾಗ್ರತೆಯೆನ್ನಲ್ಪಡುತ್ತೆ. ಸರ್ವಾರ್ಥತಾ ಪರಿಣಾಮದ ಲಯವೂ, ಏಕಾಗ್ರತಾ ಪರಿಣಾಮದ ಉದಯವೂ, ಹುಟ್ಟುವಾಗ ಸಮಾಧಿ ಪರಿಣಾಮವೆನ್ನಲ್ಪಡುವುದು.

ವಿ|| ಇದುವರಿವಿಗೂ ನಿರೋಧ ಪರಿಣಾಮಕ್ಕೂ, ಈ ಸಮಾಧಿ ಪರಿಣಾಮಕ್ಕೂ ಭೇದವೇನಂದರೆ—

(೧) ಅನುಭವದಿಂದುಂಟಾದ ವ್ಯುತ್ಥಾನಸಂಸ್ಕಾರ ರೂಪದ ವಾಸನೆಗಳನ್ನು ಬಿಡುತ್ತಾ ನಿರೋಧ ರೂಪ ಸಂಸ್ಕಾರ ವಾಸನೆಯಲ್ಲಿ ಪ್ರವೇಶಿಸುವುದಕ್ಕೆ **ನಿರೋಧ ಪರಿಣಾಮ**ವೆಂದು ಹೆಸರು.

(೨) ನಾನಾ ವಿಷಯಾಕಾರವಾಗಿ ಪರಿಣಮಿಸುವ ಚಿತ್ತ ಧರ್ಮದಿಂದ ಅನುಭವಿಸಿ ಚಿತ್ತದ ಲಯವನ್ನು ಸತ್ತ್ವೋತ್ಕೃಷ್ಟದಲ್ಲಿ ಸುಖಮಯವಾಗಿರತಕ್ಕ ಅನುಭವದ ಆವಿರ್ಭಾವವೇ **ಸಮಾಧಿ ಪರಿಣಾಮ.**

**ಅ|| ಏಕಾಗ್ರತಾ ಪರಿಣಾಮವನ್ನು ಬೋಧಿಸುತ್ತಾರೆ.**

೧೨. ಸೂ|| ಶಾನ್ತೋದಿತೌ ತುಲ್ಯ ಪ್ರತ್ಯಯೌ ಚಿತ್ತಸ್ಯೈಕಾ
ಗ್ರತಾ ಪರಿಣಾಮಃ ||

ತಾ|| ಚಿತ್ತಕ್ಕೆ ಶಾಂತವು ಹುಟ್ಟುತ್ತಿರುವಾಗ ಸಮಾನಗಳಾದ ವೃತ್ತಿ ವಿಶೇಷಗಳು ಏಕಾಗ್ರತಾ ಪರಿಣಾಮವೆನ್ನಲ್ಪಡುವುದು.

ವಿ|| ಏಕಾಕಾರವಾಗಿರುವ ಚಿತ್ತದ ಕೇವಲ ಸತ್ತ್ವೋತ್ಕೃಷ್ಟ ಪ್ರವಾಹದಲ್ಲಿ ಮೊದಲನೆ ಸ್ಥಿತಿಯ ಶಮನವೂ, ಎರಡನೇ ಸ್ಥಿತಿಯ ಉದಯವೂ, ಈ ರೀತಿಯಾಗಿ ಸ್ಥಿತಿಯು ಹುಟ್ಟುತ್ತಾಯಿರುವುದೇ ಏಕಾಗ್ರ ಪರಿಣಾಮವೆನ್ನಲ್ಪಡುವುದು.

ಹೇಗೆಂದರೆ—ಬಹಳ ದೂರವಿರುವ ಮಾರ್ಗದಲ್ಲಿ ನಡೆದುಹೋಗುವವನಿಗೆ, ನಡೆದುಹೋಗಿರುವ ಮಾರ್ಗವು ನಿಂತುಹೋಗಿರುವಹಾಗೆಯೂ, ಇನ್ನುಮುಂದೆ ಬರುವ ಮಾರ್ಗದಲ್ಲಿ ತಾನು ಪ್ರವೇಶಿಸುವವನ ಹಾಗೆಯೂ ತಿಳಿಯತಕ್ಕದ್ದು.

**ಅ|| ಪರಿಣಾಮ ಭೇದಗಳನ್ನು ಹೇಳುತ್ತಾರೆ.**

೧೩. ಸೂ|| ಏತೇನ ಭೂತೇನ್ದ್ರಿಯೇಷು ಧರ್ಮ ಲಕ್ಷಣಾವಸ್ಥಾ ಪರಿಣಾಮಾ ವ್ಯಾಖ್ಯಾತಃ ||

ತಾ|| ಮೇಲೆ ಹೇಳಿದ ನಿರೋಧ, ಸಮಾಧಿ, ಏಕಾಗ್ರತಾ ಪರಿಣಾಮಗಳ ನಿರೂಪಣೆಯಿಂದ, ಭೂತಗಳಲ್ಲಿಯೂ, ಇಂದ್ರಿಯಗಳಲ್ಲಿಯೂ, ಧರ್ಮಪರಿಣಾಮವೆಂದೂ, ವಿವರಿಸಲ್ಪಡುವುದು.

ವಿ|| ಹೇಗೆಂದರೆ—ಸ್ವಭಾವವಾಗಿರುವ ಧರ್ಮಿಗೆ ಮುಂದಿರುವ ಧರ್ಮವು ಹೋಗಿ ಬೇರೆ ಧರ್ಮವು ಹುಟ್ಟುವಿಕೆಗೆ ಧರ್ಮಪರಿಣಾಮವೆಂದೂ, ಅಂದರೆ, ಮಣ್ಣು ರೂಪವಾಗಿರುವ ಧರ್ಮಿಗೆ ಮುದ್ದೆರೂಪವಾಗಿರುವ ಧರ್ಮವು ಹೋಗಿ ಘಟ ರೂಪವಾದ ಬೇರೆ ಧರ್ಮವು ಹುಟ್ಟುತ್ತದೆ. ಅದು ಮಣ್ಣಿಗೆ ಧರ್ಮಪರಿಣಾಮವೆನ್ನಲ್ಪಡುವುದು. ಇದು ನಿರೋಧಪರಿಣಾಮಕ್ಕೆ ಪ್ರತಿಯಾಗಿರುತ್ತದೆ.

ಆ ಘಟವು ಮೊದಲು ಮಣ್ಣಿನಿಂದ ಮುಚ್ಚಲ್ಪಟ್ಟಿತ್ತು, ಅದು ಮಣ್ಣಿನೊಳಗಿನಿಂದ ಈಚೆಗೆ ಬಂತು. ಈಚೆಗೆ ಬಂದದ್ದು ನಷ್ಟವಾಗಿ ಹೋಯಿತು. ಎಂಬುದು ಘಟಕ್ಕೆ ರಕ್ಷಣಾ ಪರಿಣಾಮ. ಇದು ಸಮಾಧಿ ಪರಿಣಾಮಕ್ಕೆ ಪ್ರತಿಯಾಗಿರುತ್ತದೆ.

ಪ್ರತಿಕ್ಷಣದಲ್ಲಿಯೂ, ಪ್ರತಿವಸ್ತುವಿಗೂ ಪರಿಣಾಮವು ಹುಟ್ಟುತ್ತದೆ. ಹೇಗೆಂದರೆ, ಒಂದು ವಸ್ತುವನ್ನು ನಾವು ನೋಡಿದಾಗ ಅದರಲ್ಲಿ ಮೊದಲು ಇರುವ ಸ್ಥಿತಿ ನೋಡುವಾಗ ಇರುವುದಿಲ್ಲ. ಹೀಗೆ ನೋಡಿದ ತಕ್ಷಣದಲ್ಲಿರುವ ಸ್ಥಿತಿ, ಅನಂತರ ಕ್ಷಣದಲ್ಲಿರುವುದಿಲ್ಲವೆಂಬುದು ಪ್ರತಿಯೊಂದಕ್ಕೂ, ಅವಸ್ಥಾ ಪರಿಣಾಮವೆಂದು ಹೆಸರು. ಇದು ಏಕಾಗ್ರತಾ ಪರಿಣಾಮಕ್ಕೆ ಪ್ರತಿಯಾಗಿದೆ.

**ಅ|| ಧರ್ಮಿಯ ಲಕ್ಷಣ ಏಂಥಾದ್ದೆಂದು ಹೇಳುತ್ತಾರೆ.**

೧೪. ಸೂ|| ಶಾನ್ತೋದಿತಾ ವ್ಯಪದೇಶ್ಯ ಧರ್ಮಾನು ಪಾತೀ ಧರ್ಮೀ ||

ತಾ|| ತಮ್ಮ ತಮ್ಮ ಕೆಲಸಗಳನ್ನು ಮಾಡುವುದಕ್ಕೆ ಸಾಮರ್ಥ್ಯವಿಲ್ಲದೆ, ವಿಶ್ರಾಂತಿಯನ್ನು ಹೊಂದಿರುವಾಗಲೂ, ತಮ್ಮ ತಮ್ಮ ಕೆಲಸಗಳನ್ನು ಮಾಡುವಾಗಲೂ, ಇಂಥ ಕೆಲಸಗಳನ್ನು ಮಾಡುತ್ತೇವೆಂದು ನಿರ್ಣಯಿಸುವುದಕ್ಕೆ ಅವಶ್ಯಕವಾಗಿರುವಾಗ ಇರತಕ್ಕ ಧರ್ಮಗಳನ್ನು ಆಶ್ರಯಿಸಿರುವುದು ಧರ್ಮಿ ಎಂದು ಹೇಳಲ್ಪಡುತ್ತದೆ.

ವಿ|| ತಮ್ಮ ತಮ್ಮ ಕೆಲಸಗಳನ್ನು ಮಾಡುವುದಕ್ಕೆ ಸಾಮರ್ಥ್ಯವಿಲ್ಲದೆ ಶಾಂತವಾಗಿರುವ ಧರ್ಮಗಳನ್ನು, ತಮ್ಮ ತಮ್ಮ ಕೆಲಸಗಳನ್ನು ಮಾಡುವ ಧರ್ಮಗಳನ್ನು, ಇಂಥಾ ಕೆಲಸಗಳನ್ನು ಮಾಡುತ್ತೇವೆಂದು ನಿರ್ಣಯಿಸುವುದಕ್ಕೆ ಅಸಾಧ್ಯವಾಗಿರುವ ಧರ್ಮಗಳನ್ನು ಎಡೆಬಿಡದೆ ಆಶ್ರಯಿಸಿಕೊಂಡಿರುವುದು. ಧರ್ಮಿಯೆನ್ನಲ್ಪಡುವುದು.

ಹೇಗೆಂದರೆ—ಭಂಗಾರವೆಂಬುವ ಧರ್ಮಿ, ಘಟ್ಟಿರೂಪವಾದ ಧರ್ಮವನ್ನು ವಹಿಸಿರತಕ್ಕ ಕಾಲದಲ್ಲಿ, ಉಂಗುರ ರೂಪವಾದ ಧರ್ಮವು ಇಲ್ಲದೆಯಿರುವಹಾಗೂ, ಆ ಮೇಲೆ ಅದೇ ಉಂಗುರ ರೂಪವಾದ ಧರ್ಮವನ್ನು ಹೊಂದಿರುವ ಕಾದಲ್ಲಿ ಘಟ್ಟಿ ರೂಪವಾದ ಧರ್ಮವಿಲ್ಲದೆ ಇರುವ ಹಾಗೂ, ಈ ಘಟ್ಟಿಯಲ್ಲಿಯೂ, ಉಂಗರದಲ್ಲಿಯೂ, ಕೂಡ ಎಡಬಿಡದೆ ಏಕರೂಪವಾಗಿರತಕ್ಕ ಭಂಗಾರವು ಧರ್ಮಿಯೆನ್ನಲ್ಪಡುತ್ತದೆ.

**ಅ|| ಒಂದು ಧರ್ಮಿ ಅನೇಕ ಪರಿಣಾಮಗಳು ಹುಟ್ಟುತ್ತವೆಂದು ಹೇಳುತ್ತಾರೆ.**

೧೫. ಸೂ|| ಕ್ರಮಾನ್ಯತ್ವಂ ಪರಿಣಾಮಾನ್ಯತ್ವೇ ಹೇತುಃ ||

ತಾ|| ಧರ್ಮಿಗೆ ಯಾವ ಕ್ರಮವಿದೆಯೋ ಅಂಥಾ ಕ್ರಮದಲ್ಲಿ ಪ್ರತಿಕ್ಷಣವೂ ಬೇರೆಯಾಗಿ ಕಾಣಿಸುವಿಕೆಗೆ ಪರಿಣಾಮಾಂತರ ಕಾರಣವೆನ್ನಲ್ಪಡುವುದು.

ವಿ|| ಪೃಥಿವಿಯಲ್ಲಿ ಮೊದಲು ಚೂರ್ಣರೂಪವು. ಅನಂತರ ಆ ಚೂರ್ಣದಿಂದ ಮುದ್ದೆರೂಪವು ಆ ಮೇಲೆ ಅದರಿಂದ ಕಪಾಲಗಳು ಆ ಮೇಲೆ ಆ ಕಪಾಲಗಳಿಂದ ಘಟವು ಹೀಗೆ ಮಣ್ಣುರೂಪವಾದ ಒಂದೇ ಧರ್ಮದಲ್ಲಿ ಅನೇಕ ಪರಿಣಾಮಗಳು ಕಾಣುವುದರಿಂದ ಒಂದು ಧರ್ಮಿಗೆ ಅನೇಕ ಪರಿಣಾಮಗಳು ಆಗುವುದಕ್ಕೆ ಸಂದೇಹವಿಲ್ಲ. ಆ ಕಾರಣವನ್ನು ಹಿಡಿದು, ಹೀಗೆಯೇ ಚಿತ್ತಕ್ಕೂ, ಭೂತಗಳಿಗೂ, ಇಂದ್ರಿಯಗಳಿಗೂ, ಅನೇಕ ಪರಿಣಾಮಗಳಿವೆಯೆಂದು ತಿಳಿಯತಕ್ಕದ್ದು.

**ಅ॥ ಪರಿಣಾಮಗಳ ಸಂಯಮದಿಂದ ತ್ರಿಕಾಲ ಜ್ಞಾನವು ಹುಟ್ಟುತ್ತದೆಂದು ನಿರೂಪಿಸುತ್ತಾರೆ.**

೧೬. ಸೂ॥ ಪರಿಣಾಮತ್ರಯಸಂಯಮಾ ದತೀತಾ ನಾಗತಾ ಜ್ಞಾನಮ್ ॥

ತಾ॥ ಈ ಧರ್ಮಿಗೆ ಇಂಥ ಧರ್ಮವು, ಇಂಥ ಲಕ್ಷಣವು, ಇಂಥ ಯವಸ್ಥೆ, ಎಂದು ಪರಿಣಾಮತ್ರಯದ ಸಂಯಮದಿಂದ ಕಳೆದು ಹೋದ ವಸ್ತುಗಳ ವಿಷಯದಲ್ಲಿ ಜ್ಞಾನವು ಹುಟ್ಟುತ್ತದೆ.

ವಿ॥ ಧರ್ಮ ಲಕ್ಷಣಾವಸ್ಥಾ ಪರಿಣಾಮಗಳಿಂದ ಯೋಗಿಗೆ ಈ ವಸ್ತುವು ಈ ರೀತಿಯಾಗಿತ್ತು; ಈ ರೀತಿಯಾಗಿದೆ, ಈ ರೀತಿಯಾಗುತ್ತದೆ ಯೆಂದು ವಸ್ತು ವಿಷಯುಕವಾದ ತ್ರಿಕಾಲ ಜ್ಞಾನವು ಹುಟ್ಟುತ್ತದೆ. ಅಂದರೆ ಭೂತ, ಭವಿಷ್ಯತ್, ವರ್ತಮಾನ ಕಾಲಗಳ ಜ್ಞಾನವು ಚೆನ್ನಾಗಿ ಹುಟ್ಟುತ್ತದೆ.

**ಅ॥ ಸಕಲ ಜಂತು ಭಾಷಾಜ್ಞಾನ ಸಿದ್ಧಿ ಹುಟ್ಟುವುದಕ್ಕೆ ಉಪಾಯವನ್ನು ಹೇಳುತ್ತಾರೆ.**

೧೭. ಸೂ॥ ಶಬ್ದಾರ್ಥ ಪ್ರತ್ಯಯಾನಾ, ಮಿತರೇತರಾ ಧ್ಯಾಸಾತ್ಸಂಕರ ಸ್ತತ್ಪ್ರವಿಭಾಗ ಸಂಯಮಾ ತ್ಸರ್ವ ಭೂತ ಋತ ಜ್ಞಾನಮ್ ॥

ತಾ॥ ಕ್ಲೃಪ್ತ ವರ್ಣಾತ್ಮಕವಾದ ಶಬ್ದವು, ಜಾತಿ, ಗುಣ ಕ್ರಿಯಾ ರೂಪವಾದ ಆ ಶಬ್ದದ ಅರ್ಥವು, ಆ ಕ್ಲೃಪ್ತವಾದ ಅರ್ಥದಿಂದ ಹುಟ್ಟುವ ಜ್ಞಾನವು, ಇವುಗಳ ಶಬ್ದಾರ್ಥ ಜ್ಞಾನಗಳಲ್ಲಿ ಒಂದನ್ನು ಬೇರೆ ಯೊಂದೆಂಬುದಾಗಿ ಬುದ್ಧಿಗೆ ತೆಗೆದುಕೊಳ್ಳುವುದರಿಂದ ಒಂದರಲ್ಲಿ ಒಂದು ಕಲೆತು ಹೋಗುತ್ತದೆ.

ಆ ರೀತಿಯಾಗಿ ಹೋಗದ ಹಾಗೆ ಪ್ರತ್ಯೇಕ ಪ್ರತ್ಯೇಕವಾಗಿ ವಿಭಜನೆ ಮಾಡಿ ಸಂಯಮವನ್ನು ಮಾಡುವುದರಿಂದ ಸಕಲ ಪ್ರಾಣಿಗಳ ಭಾಷಾಜ್ಞಾನವಾಗುವುದು.

ವಿ॥ ಇದು ಈ ಶಬ್ದವು, ಇದು ಇದರ ಅರ್ಥವಾದ ವ್ಯಕ್ತಿ, ಇದು ಈ ವ್ಯಕ್ತಿಯ ಜ್ಞಾನವು. ಎಂದು ಬೇರೆ ಬೇರೆಯಾಗಿ ವಿಭಜನೆಮಾಡಿ ಸಂಯಮವನ್ನು

ಮಾಡುವುದರಿಂದ ಸಕಲ ಪ್ರಾಣಿಗಳ ಭಾಷಾ ಜ್ಞಾನವು ಅಂದರೆ ಮೃಗ, ಪಶು, ಪಕ್ಷಿ, ಸರ್ಪ, ಪಿಪೀಲಿಕಾದಿಗಳ ಭಾಷಾಜ್ಞಾನವು ಹುಟ್ಟುತ್ತದೆ.

ಹೇಗೆಂದರೆ—ಗೋವನ್ನು ಕರೆದುಕೊಂಡು ಬಾ, ಎಂದು ಹೇಳಿದಾಗ ಗೋಸ್ವರೂಪವಾದ ಅರ್ಥವೆಂದೂ, ಈ ಅರ್ಥವನ್ನು ಹೇಳುವುದು ಗೋವು ಎಂಬ ಶಬ್ದವೆಂದೂ, ಈ ಶಬ್ದಾರ್ಥಗಳೆರಡರಿಂದ ಹುಟ್ಟಿದ್ದು ಈ ಜ್ಞಾನ ವೆಂದೂ, ವಿಮರ್ಶನೆಯಿಲ್ಲದೆ ಇವುಗಳೆಲ್ಲವನ್ನೂ ಅಭೇದವಾಗಿ ತಿಳಿಯತಕ್ಕ ವನು ಇದು ಗೋವು ಎಂಬ ವ್ಯಕ್ತಿ ವಾಚಕವಾದ "ಗೋವು" ಎಂಬ ಶಬ್ದವೆಂದೂ, ಈ "ಗೋವು" ಎಂಬಶಬ್ದಕ್ಕೆ (ಗೋವು) ಎಂಬ ವ್ಯಕ್ತಿ ರೂಪಕವಾದ ಅರ್ಥವೆಂದೂ, ಈ ಶಬ್ದಾರ್ಥಗಳನ್ನು ತಿಳಿಸಲ್ಪಡುವುದೇ ಜ್ಞಾನವೆಂದೂ, ಪರಸ್ಪರ ಭೇದವನ್ನು ತಿಳಿದುಕೊಂಡು ವ್ಯವಹರಿಸುವುದಿಲ್ಲ. ಹೇಗೆಂದರೆ (ಗೋವು) ಅನ್ನುವಕಡೆ ಯಾವುದು ಶಬ್ದ, ಯಾವುದು ಅರ್ಥ. ಯಾವುದು ಜ್ಞಾನಾರ್ಥವೆಂದು ಕೇಳಿದರೆ ಈ ಮೂರು ಪ್ರಶ್ನೆಗಳಿಗೆ (ಗೋವು) ಎಂದು ಒಂದೇ ರೂಪವಾದ ಉತ್ತರವನ್ನು ಹೇಳುವವನೇ ಹೊರತು ಪರಸ್ಪರ ಭೇದವನ್ನು ತಿಳಿದು ಉತ್ತರ ಕೊಡುವವನಲ್ಲ, ಏತಕ್ಕೆಂದರೆಆವುತ್ತರವನ್ನು ಕೊಟ್ಟಾತನು ಶಬ್ದಾರ್ಥ ಜ್ಞಾನಗಳನ್ನು ಅಭೇದ ವಾಗಿ ತಿಳಿಯದ್ದರಿಂದ ಶಬ್ದಾರ್ಥ ಜ್ಞಾನಗಳು ಮೂರಕ್ಕೂ ಒಂದೇ ಉತ್ತರ ವನ್ನು ಕೊಡಲಾರನು. ಆದುದರಿಂದ ಶಬ್ದಾರ್ಥ ಜ್ಞಾನಗಳನ್ನು ಚೆನ್ನಾಗಿ ವಿಭಜಿಸಿ ಸಂಯಮವನ್ನು ಮಾಡುವುದರಿಂದ ಸಮಸ್ತ ಜೀವಜಂತುಗಳ ಭಾಷೆಗಳು ತಿಳಿಯುತ್ತದೆ.

**ಅ॥ ಪೂರ್ವ ಜನ್ಮದ ಜ್ಞಾನಸಿದ್ಧಿ ಯಾಗುವುದಕ್ಕೆ ಉಪಾಯವನ್ನು ಹೇಳುತ್ತಾರೆ.**

೧೮ ಸೂ॥ ಸಂಸಾರ ಸಾಕ್ಷಾತ್ಕರಣಾ ತ್ಪೂರ್ವಜಾತಿ ಜ್ಞಾನಮ್ ॥

ತಾ॥ ಎರಡು ವಿಧಗಳಾದ ಚಿತ್ತಸಂಸ್ಕಾರಗಳಲ್ಲಿ ಸಂಯಮವನ್ನು ಮಾಡುವುದರಿಂದ ತನ್ನಲ್ಲಿ ತೋರುತ್ತಿರುವ ಸಂಸ್ಕಾರಗಳನ್ನು ವಿಮರ್ಶಿ ಸಿದರೆ ಜನ್ಮಾಂತರಗಳಲ್ಲಿ ತನಗೆ ಹುಟ್ಟುವ ಜಾತಿ ಮೊದಲಾದುವು ಗೋಚರಿಸುತ್ತಾಯಿರುತ್ತವೆ.

ವಿ॥ **ಎರಡು ವಿಧ ಸಂಸ್ಕಾರಗಳೆಂದರೆ.**—ಜನ್ಮಜನ್ಮಾಂತರಾದ್ಯನುಭವದಿಂದ ಚಿತ್ತದಲ್ಲಿ ವಾಸನಾರೂಪವಾಗಿ ನಿಂತು ಈಗ ಸ್ಮೃತಿಯನ್ನು ಹುಟ್ಟಿಸುವಂಥ ಸಂಸ್ಕಾರಗಳೆಂದೂ.

ಸುಕೃತದುಷ್ಕೃತ ಕರ್ಮಗಳನ್ನು ಮಾಡಿರುವುದರಿಂದಾಗಿರುವ ಪುಣ್ಯ, ಪಾಪ, ಪರಿಪಾಕದಿಂದ ಸುಖ ದುಃಖಗಳಿಗೆ ಕಾರಣವಾಗಿ ಜಾತ್ಯಾಯುರ್ಭೋಗ ರೂಪವಾದ ಸಂಸ್ಕಾರಗಳೆಂದೂ ಎರಡು ವಿಧಗಳು.

ಈ ಯರಡು ವಿಧಗಳಾದ ಚಿತ್ತಸಂಸ್ಕಾರಗಳ ಸಂಯಮಗಳಿಂದ ತಾನು ಪೂರ್ವಜನ್ಮದಲ್ಲಿ ಯಾವ ಜಾತಿಪ್ರಾಣಿ ಯಾಗಿದ್ದೆನೆಂಬುದೇ ಮೊದಲಾದಂಥಾದ್ದು ಚೆನ್ನಾಗಿ ತಿಳಿಯುವುದು.

**ಅ|| ಪರಚಿತ್ತಜ್ಞಾನವನ್ನು ತಿಳಿಯಲು ಉಪಾಯವನ್ನು ಹೇಳುತ್ತಾರೆ**

೧೯. ಸೂ|| ಪ್ರತ್ಯಯಸ್ಯ ಪರಚಿತ್ತ ಜಾನಮ್ ||

ತಾ|| ಪರರ ಅಥವ ಅನ್ಯರ ಮುಖರಾಗಾದಿ ಭಾವಗಳಿಂದಾಗುವ ಜ್ಞಾನದಲ್ಲಿ ಸಂಯಮವನ್ನು ಮಾಡುವುದರಿಂದ ಅವರ ಅಭಿಪ್ರಾಯಗಳು ಗೋಚರಿಸುತ್ತವೆ.

ವಿ|| ಇತರರ ಮಾತುಗಳು, ನಡೆನುಡಿಗಳು, ಮುಖವಿಕಾಸವು, ಮೊದಲಾದುವನ್ನು ಜಾಗ್ರತೆಯಾಗಿ ಕಂಡುಹಿಡಿದಮೇಲೆ, ಅವರ ಚಿತ್ತದಲ್ಲಿರುವ ಅಭಿಪ್ರಾಯ ವಿಂಥದ್ದೇ ಎಂದು ಹೇಳುವಂಥ ಜ್ಞಾನವು ಹುಟ್ಟುತ್ತದೆ.

**ಅ|| ಪರಚಿತ್ತಜ್ಞಾನವನ್ನು ತಿಳಿಯದೆಯಿರುವುದಕ್ಕೆ ಕಾರಣವಿಂಥಾದ್ದೆಂದು ಹೇಳುತ್ತಾರೆ.**

೨೦. ಸೂ|| ನತತ್ಸಾಲಮ್ಬನಮ್ ತಸ್ಯವಿಷಯಿಾಭೂತತ್ವಾತ್ ||

ತಾ|| ಪರಪುರುಷರು ಆಲೋಚನೆಮಾಡುವ ಚಿತ್ತವಿಕಾರಾದಿಗಳು ಬಾಹ್ಯದಲ್ಲಿ ಕಾಣಿಸದೆ ಆಂತರ್ಯದಲ್ಲಿಯೇ ಆಲೋಚನೆ ಮಾಡುವಾಗ ಅಂಥಾದ್ದನ್ನು ಸಂಯಮದಿಂದ ಕಂಡುಹಿಡಿಯಲು ಆಗುವುದಿಲ್ಲ.

ವಿ|| ಇವನು ಕೃಷ್ಣವರ್ಣದ ಆಲೋಚನೆಯಲ್ಲಿದ್ದಾನೆ, ಇವನು ರಕ್ತವರ್ಣದ ಆಲೋಚನೆಯಲ್ಲಿದ್ದಾನೆ, ಎಂಬಿಂಥಾವಿಷಯದಲ್ಲಿ ಕೂಡಿರುವ ಪರರ ಚಿತ್ತವು ಮುಖರಾಗಾದಿ ಭಾವಗಳಿಂದ ಮೇಲೆ ತಿಳಿಯದ್ದರಿಂದ ಅಂಥಾ ಚಿತ್ತದಲ್ಲಿ ಸಂಯಮವನ್ನು ಮಾಡುವುದಕ್ಕೆ ಆಗುವುದಿಲ್ಲ.

**ಅ|| ಅದೃಶ್ಯಕರಣ ಸಿದ್ಧಿಯನ್ನು ನಿರೂಪಿಸುತ್ತಾರೆ.**

೨೧. ಸೂ|| ಕಾಯರೂಪ ಸಂಯಮಾದ್ಗ್ರಹ್ಯಾಶಕ್ತಿ ಸ್ತಂಭೇ ಚಕ್ಷುಃ ಪ್ರಕಾಶ ಸಂಯೋಗೇನ್ತರ್ಧಾನಮ್ ||

ತಾ॥ ತನ್ನ ಆಕಾರಾದಿ ವಿಶಿಷ್ಟಸ್ವರೂಪದಲ್ಲಿ ಸಂಯಮವನ್ನು, ಮಾಡುವುದರಿಂದ, ಇತರರು ಗ್ರಹಿಸಬೇಕಾದ ಶಕ್ತಿಗೆ ಪ್ರತಿಬಂಧಕವು ಹುಟ್ಟುವುದಲ್ಲದೆ ಇತರರ ದೃಷ್ಟಿಗೆ ಶರೀರವು ಕಾಣದೆ ಅದೃಶ್ಯವಾಗುತ್ತದೆ.

ವಿ॥ ತನ್ನ ಶರೀರಾದ್ಯವಯವಗಳನ್ನು ಸಂಯಮ ಮಾಡುವುದರಿಂದ ಪರರಿಗೆ ತನ್ನ ಶರೀರದ ರೂಪಾದಿಗಳು ಪ್ರತಿಬಂಧಕವಾಗುತ್ತದೆ. ಆದ್ದರಿಂದ ಶರೀರವು ಕಾಣಿಸುವುದಿಲ್ಲ.

**ಅ॥ ಶಬ್ದಾದ್ಯದೃಶ್ಯಕರಣಿ ಲಕ್ಷಣವನ್ನು ಹೇಳುತ್ತಾರೆ.**

೨೨. ಸೂ॥ ಏತೇನ ಶಬ್ದಾದ್ಯನ್ತರ್ಧಾನ ಮುಕ್ತಮ್ ॥

ತಾ॥ ಮೇಲೆ ಹೇಳಿದ ದೇಹಾದೃಶ್ಯ ಕರಣೋಪಾಯದಿಂದಲೇ ಶಬ್ದಾದಿಗಳನ್ನು ತಿಳಿಯದ ಹಾಗೆ ಮಾಡಬಹುದು.

ವಿ॥ ಅದೃಶ್ಯ ಕರಣೋಪಾಯದಿಂದ ಶಬ್ದ, ಸ್ಪರ್ಶ, ರಸ, ಗಂಧಗಳನ್ನು ಅದೃಶ್ಯ ವಾಗಿ ಮಾಡಬಹುದು.

**ಅ॥ ಮರಣ ಕಾಲವನ್ನು ತಿಳಿಯತಕ್ಕ ಸಿದ್ಧಿಯನ್ನು ಹೇಳುತ್ತಾರೆ.**

೨೩. ಸೂ॥ ಸೋಪಕ್ರಮಂ ನಿರುಪಕ್ರಮಂಚ ಕರ್ಮತತ್ಸಂಯಮಾ ದಪರಾನ್ತ ಜ್ಞಾನ ಮರಿಷ್ಟೇಭ್ಯೋವಾ ॥

ತಾ॥ ತನ್ನ ಕರ್ಮವು ತನಗೆ ಫಲವನ್ನು ಕೊಡುವುದಕ್ಕೆ ಉಪಕ್ರಮಿ ಸಿದೆಯೆಂದೂ, ತನಗೆ ಫಲವು ಕೊಡುವುದಕ್ಕೆ ಉಪಕ್ರಮಿಸದೆ ಇದೆ ಯೆಂದೂ ಎರಡು ವಿಧಗಳು. ಆ ಎರಡು ವಿಧ ಕರ್ಮಗಳನ್ನು ಸಂಯಮ ಮಾಡುವುದರಿಂದ ಅರಿಷ್ಟಸೂಚನೆಗಳು ಮರಣ ಕಾಲವು, ಗೋಚರಿಸು ತ್ತದೆ.

ವಿ॥ ಫಲವನ್ನು ಕೊಡುವುದಕ್ಕೆ ಉಪಕ್ರಮಿಸಿರುವುದು **ಸೋಪಕ್ರಮ** ಕರ್ಮವು. ಮುಂದೆ ಫಲವನ್ನು ಕೊಡುವುದಕ್ಕೆ ಮಿಕ್ಕಿರುವುದು **ನಿರುಪಕ್ರಮ** ಕರ್ಮವು. ಇವುಗಳ ಸಂಯಮಗಳಿಂದ ಮರಣಕಾಲವು ಗೋಚರಿಸುತ್ತದೆ.

ಹೇಗೆಂದರೆ—ಬಿಸಿಲಿರುವ ಪ್ರದೇಶದಲ್ಲಿ ಒಣಗಿಸುವುದಕ್ಕೆ ಹಾಕಿದ ಬಟ್ಟೆಯು ತೇವ ಶೀಘ್ರವಾಗಿ ಒಣಗಿದ ಹಾಗೆಯೂ, ಸೋಪಕ್ರಮ ಕರ್ಮವು ಪ್ರತಿದಿನವೂ, ಫಲಗಳನ್ನು ಕೊಡುವುದರಿಂದಲೂ, ಅದಕ್ಕೆ ವಿರೋಧವಾದ ಕರ್ಮಾಚರಣೆಯಿಂದ ಕೂಡ, ಶೀಘ್ರವಾಗಿಯೇ ನಾಶಹೊಂದುತ್ತದೆ.

ಶೀತಲ ಪ್ರದೇಶದಲ್ಲಿ ಮಡಚಿ ಹಾಕಿರಿಸಿದ ಬಟ್ಟೆ ನಿಧಾನವಾಗಿ ಒಣಗುತ್ತಾ ಬರುವ ಹಾಗೆ ನಿರುಪಕ್ರಮ ಕರ್ಮವು ಕಾಲಕ್ರಮದಿಂದಲೂ, ಅದಕ್ಕೆ ವ್ಯತಿರಿಕ್ತವಾದ ಕರ್ಮವನ್ನು ಮಾಡುವುದರಿಂದಲೂ, ಸಾವಕಾಶವಾಗಿ ನಾಶ ಹೊಂದುತ್ತದೆ. ಈ ಎರಡು ವಿಧಗಳಾದ ಕರ್ಮಗಳಲ್ಲಿ ಸಂಯಮವನ್ನು ಮಾಡುವುದರಿಂದಲೂ, ತನಗೆ ಇಂಥ ಪ್ರದೇಶದಲ್ಲಿ, ಇಂಥ ಸ್ಥಳದಲ್ಲಿ, ಇಂಥ ವೇಳೆಯಲ್ಲಿ ಈರೀತಿಯಾಗಿ ಶರೀರ ವಿಯೋಗವು ಆಗುತ್ತದೆ ಎಂದು ನಿಸ್ಸಂಶಯವಾಗಿ ತಿಳಯುವುದು.

ಅರಿಷ್ಟ ಸೂಚನೆಗಳಿಂದಲೂ, ಮರಣಕಾಲವು ಗೋಚರಿಸುತ್ತದೆ. ಆ ಸೂಚನೆಗಳು ಮೂರುವಿಧ.

(೧) ತರ್ಜನೀ ಬೆರಳಿಂದ ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡರೆ ಕಿವಿಯೊಳಗಿನ ಶಬ್ದವು ಕೇಳಿಸದೆ ಹೋಗುವಿಕೆ; ನಾಲಿಗೆಯನ್ನು ಚಾಚಿ ನೋಡಿದರೆ, ನಾಲಿಗೆಯ ಕೊನೆಯಭಾಗ ಕಾಣದೆ ಹೋಗುವಿಕೆ; ದೀಪವನ್ನು ನೋಡಿದರೆ ಎರಡು ಶಿಖೆಗಳಾಗಿ ಕಾಣುವಿಕೆ; ಇವು ಅಧ್ಯಾತ್ಮಿಕ (ದೇಹಕ್ಕೆ ಸಂಬಂಧವಾದ) ಅರಿಷ್ಟಗಳೆನ್ನಲ್ಪಡುವುದು.

(೨) ವಿಕಾರರೂಪಗಳು ಕಾಣಿಸುವಿಕೆ, ಸೂರ್ಯನನ್ನು ನೋಡಿದರೆ ಚೂರು ಚೂರಾಗಿ ಕಾಣಿಸುವಿಕೆ, ಇವುಗಳಿಂದಲೂ ತಮ್ಮ ಮರಣ ಕಾಲವು ಸಮೀಪಿಸಿದೆಯೆಂದು ತಿಳಿದುಕೊಳ್ಳಬಹುದು. ಇವು ಆಧಿಭೌತಿಕಾರಿಷ್ಟಗಳೆನ್ನಲ್ಪಡುವುದು.

(೩) ಯಾವಾಗಲೂ ನೋಡದೆ ಇರತಕ್ಕ ಸ್ವರ್ಗಾದಿ ಲೋಕಾಂತರಗಳನ್ನು ಮತ್ತು ಪದಾರ್ಥಗಳನ್ನು ನೋಡುವಿಕೆ, ಮೊದಲಾದವುಗಳಿಂಲೂ, ತನ್ನ ಅಂತ್ಯಕಾಲವು ಸಮೀಪಿಸಿದೆಯೆಂದು ತಿಳಿಯಬೇಕು. ಇವು ಆಧಿದೈವಿಕಗಳೆನ್ನಲ್ಪಡುವುದು.

**ಅ|| ಚಿತ್ತಪರಿಕರ್ಮ ಸಿದ್ಧಿಯನ್ನು ನಿರೂಪಿಸುತ್ತಾರೆ.**

೨೪. ಸೂ|| ಮೈತ್ರ್ಯಾದಿಷು ಬಲಾನಿ ||

ತಾ|| ಮೈತ್ರಿ, ಮುದಿತ, ಕರುಣ, ಉಪೇಕ್ಷೆ ಎಂಬಿವುಗಳನ್ನು ಸಂಯಮ ಮಾಡುವುದರಿಂದ ಆ ಮೈತ್ರ್ಯಾದಿಗಳು ವೃದ್ಧಿಯಾಗುತ್ತವೆ.

ವಿ|| ಮೈತ್ರ್ಯಾದಿಗಳ ಸಂಯಮದಿಂದ ತಾನು ಅಭ್ಯಾಸವನ್ನು ಮಾಡದೆ ಹೋದರೂ ಅವು ವೃದ್ಧಿಯಾಗುತ್ತವೆ. (ಈ ವಿಷಯವು ೧ನೇ ಪಾದದ ೩೩ನೇ ಸೂತ್ರದಲ್ಲಿ ವಿವರಿಸಲ್ಪಟ್ಟಿದೆ.)

**ಅ|| ದೇಹಬಲವನ್ನು ತಾನು ಹೊಂದಿದ ಹಾಗೆ ಮಾಡಿಕೊಳ್ಳುವುದಕ್ಕೆ ಉಪಾಯವನ್ನು ಹೇಳುತ್ತಾರೆ.**

೨೫. ಸೂ|| ಬಲೇಷು ಹಸ್ತಿ ಬಲಾದೀನಿ ||

ತಾ|| ಆನೆ, ಸಿಂಹ ಮೊದಲಾದುವುಗಳ ಬಲದಲ್ಲಿ ಸಂಯಮವನ್ನು ಮಾಡುವುದರಿಂದ ಆನೆ, ಸಿಂಹ ಮೊದಲಾದುವುಗಳ ಬಲವು ಹುಟ್ಟುತ್ತದೆ.

ವಿ|| ಆನೆ, ಸಿಂಹ, ಕೋತಿ, ಗರುಡ, ಶರಭ, ಗಂಡಭೇರುಂಡ, ತಿಮಿ ತಿಮಿಂಗಿಲವೇತ್ಯಾದಿ ಮಹಾಶಕ್ತಿಯುಳ್ಳಂಥವುಗಳಲ್ಲಿ ಸಂಯಮವನ್ನು ಮಾಡಿದರೆ ತಾನು ಮಾಡಿದ ಬಲ ಪರಾಕ್ರಮಾದಿಗಳು ಹುಟ್ಟುತ್ತವೆ.

**ಅ|| ಪರೋಕ್ಷವಾಗಿರತಕ್ಕ ವಸ್ತುಗಳನ್ನು ನೋಡುವುದಕ್ಕೆ ಉಪಾಯವನ್ನು ಹೇಳುತ್ತಾರೆ.**

೨೬. ಸೂ|| ಪ್ರವೃತ್ತ್ಯಾಲೋಕ ನ್ಯಾಸಾ ತ್ಸೂಕ್ಷ್ಮ ವ್ಯವಹಿತ ವಿಪ್ರಕೃಷ್ಟ ಜ್ಞಾನಮ್ ||

ತಾ|| ವಿಷಯವತಿ, ಜ್ಯೋತಿಷ್ಮತಿ ಎಂಬ ವಿಷಯಗಳಲ್ಲಿ ಸಾತ್ತ್ವಿಕಾಶದೃಷ್ಟಿಯಿಂದ ನೋಡಿ ಸಂಯಮವನ್ನು ಮಾಡುವುದರಿಂದ ಪರಮಾಣುವೇ ಮೊದಲಾಗಿರತಕ್ಕ ಅತಿ ಸೂಕ್ಷ್ಮವಾದ ವಸ್ತುಗಳನ್ನೂ, ಭೂಮಿಯಲ್ಲಿ ಹೂಣಿರತಕ್ಕ ವಸ್ತುಗಳನ್ನೂ ಮೇರುವೇ ಮೊದಲಾದ ಪರ್ವತಗಳ ಹಿಂಭಾಗದಲ್ಲಿ ಕಾಣಿಸದೆಯಿರತಕ್ಕ ಸಿದ್ಧರಸಾದಿ ವಸ್ತುಗಳನ್ನೂ, ಗೋಚರಿಸುವ ಜ್ಞಾನವು ಹುಟ್ಟುತ್ತದೆ.

ವಿ|| ವಿಷಯವತೀ, ಜ್ಯೋತಿಷ್ಮತಿಗಳಿಂದ ಉತ್ಕೃಷ್ಟವಾದ ಚಿತ್ತೇಂದ್ರಿಯಗಳಲ್ಲಿ ಆಯಾ ವಿಷಯಗಳನ್ನು ಸೇರಿಸಿಕೊಂಡು ಸಂಯಮವನ್ನು ಮಾಡುವುದರಿಂದ ಅತಿಸೂಕ್ಷ್ಮವಾದವುಗಳೂ, ಭೂಮಿಯಲ್ಲಿರತಕ್ಕವುಗಳೂ, ದೂರದಲ್ಲಿದ್ದು ಕಾಣದೆ ಇರತಕ್ಕವುಗಳೂ, ಮೇರುವು ಪಶ್ಚಾದ್ಭಾಗದಲ್ಲಿರತಕ್ಕ ಸಿದ್ಧ ಮೂಲಿಕಾದಿಗಳೂ, ಗೋಚರಿಸುತ್ತವೆ. (೧ನೇ ಪಾದದ ೩೫ನೇ ಸೂತ್ರದಲ್ಲಿ ವಿಷಯವತಿಯನ್ನು ಕುರಿತು, ೩೬ನೇ ಸೂತ್ರದಲ್ಲಿ ಜ್ಯೋತಿಷ್ಮತಿಯನ್ನು ಕುರಿತು ಹೇಳಲ್ಪಟ್ಟಿದೆ.)

**ಅ|| ಲೋಕಾನ್ತರ ಜ್ಞಾನಸಿದ್ಧಿಯನ್ನು ಹೇಳುತ್ತಾರೆ.**

೨೭. ಸೂ|| ಭುವನ ಜ್ಞಾನಂ ಸೂರ್ಯ ಸಂಯಮಾತ್ ||

ತಾ|| ಸೂರ್ಯನಲ್ಲಿ ಸಂಯಮವನ್ನು ಮಾಡುವುದರಿಂದ ಭೂರ್ಭುವಾದಿ ಚತುರ್ದಶಲೋಕಗಳ ಜ್ಞಾನವು ಹುಟ್ಟುತ್ತದೆ.

ವಿ|| ಪ್ರಕಾಶಮಯನಾದ ಸೂರ್ಯನಲ್ಲಿ ಮಾಡುವ ಸಂಯಮದಿಂದ.

| ಊರ್ಧ್ವಲೋಕಾದಿಗಳ | ಅಧೋಲೋಕಗಳ |
|---|---|
| ೧ ಭೂಲೋಕ | ೧ ಅತಲ |
| ೨ ಭುವರ್ಲೋಕ | ೨ ವಿತಲ |
| ೩ ಸುವರ್ಲೋಕ | ೩ ಸುತಲ |
| ೪ ಮಹಾಲೋಕ | ೪ ತಲಾತಲ |
| ೫ ತಪೋಲೋಕ | ೫ ರಸಾತಲ |
| ೬ ಜನೋಲೋಕ | ೬ ಮಹಾತಲ |
| ೭ ಸತ್ಯಲೋಕಗಳ | ೭ ಪಾತಾಲಗಳ |

ಸಕಲ ವಸ್ತ್ವಾದಿ ಜ್ಞಾನವು ಗೋಚರಿಸುತ್ತದೆ.

**ಅ|| ಗ್ರಹನಕ್ಷತ್ರಜ್ಞಾನ ಸಿದ್ಧಿಯನ್ನು ಹೇಳುತ್ತಾರೆ.**

೨೮. ಸೂ|| ಚನ್ದ್ರೇ ತಾರಾ ವ್ಯೂಹ ಜ್ಞಾನಮ್ ||

ತಾ|| ಚಂದ್ರನಲ್ಲಿ ಸಂಯಮವನ್ನು ಮಾಡುವುದರಿಂದ ನಕ್ಷತ್ರ ಸಮೂಹದ ಜ್ಞಾನವು ಸಿದ್ಧಿಸುತ್ತದೆ.

ವಿ|| ಪ್ರಕಾಶಾತ್ಮಕನಾದ ಚಂದ್ರನಲ್ಲಿ ಸಂಯಮವನ್ನು ಮಾಡುವುದರಿಂದ ಭೌತಿಕ ವಸ್ತುಗಳು (ಸಮಸ್ತ ಗ್ರಹನಕ್ಷತ್ರಗಳು) ಗೋಚರಿಸುತ್ತವೆ.

**ಅ|| ಗ್ರಹನಕ್ಷತ್ರ ಸಂಚಾರ ಜ್ಞಾನ ಸಿದ್ಧಿಯನ್ನು ಹೇಳುತ್ತಾರೆ.**

೨೯. ಸೂ|| ಧ್ರುವೇ ತದ್ಗತಿ ಜ್ಞಾನಮ್ ||

ತಾ|| ಧ್ರುವನಲ್ಲಿ ಸಂಯಮವನ್ನು ಮಾಡುವುದರಿಂದ ಆ ಗ್ರಹ ನಕ್ಷತ್ರಗಳ ಸಂಚಾರ ಜ್ಞಾನವು ಹುಟ್ಟುತ್ತದೆ.

ವಿ|| ಗ್ರಹ ನಕ್ಷತ್ರಗಳಿಗೆ ಪ್ರಧಾನನಾಗಿರುವ ಧ್ರುವ ನಕ್ಷತ್ರದಲ್ಲಿ ಸಂಯಮ ಮಾಡುವುದರಿಂದ ಗ್ರಹನಕ್ಷತ್ರಾದಿಗಳ ಸಂಚಾರಗಳು ಗೋಚರವಾಗುವುದು.

**ಅ|| ಶರೀರಾಂತರ ಕೋಶಾದಿ ಜ್ಞಾನಸಿದ್ಧಿಯನ್ನು ಹೇಳುತ್ತಾರೆ.**

೩೦. ಸೂ|| ನಾಭಿ ಚಕ್ರೇ ಕಾಯ ವ್ಯೂಹ ಜ್ಞಾನಮ್ ||

ತಾ॥ ನಾಭಿ ಚಕ್ರದಲ್ಲಿ ಸಂಯಮವನ್ನು ಮಾಡುವುದರಿಂದ ಕಾಯವ್ಯೂಹ ಜ್ಞಾನವು ಹುಟ್ಟುತ್ತದೆ.

ವಿ॥ ದೇಹದ ಒಳಗಿನ ನಾಭಿ ಚಕ್ರದಲ್ಲಿ ಸಂಯಮವನ್ನು ಮಾಡುವುದರಿಂದ ರಸ, ಮಲ, ಧಾತು, ನಾಡೀ, ಚಕ್ರಕೋಶಗಳ ಸಮಸ್ತ ಸ್ವರೂಪಗಳು ಚೆನ್ನಾಗಿ ಗೋಚರಿಸುತ್ತದೆ.

**ಅ॥ ಕ್ಷುತ್ಪಿಪಾಸಾನಿವಾರಣ ಸಿದ್ಧಿಯನ್ನು ಹೇಳುತ್ತಾರೆ.**

೩೧. ಸೂ॥ ಕಂಠಕೂಪೇ ಕ್ಷುತ್ಪಿ ಪಾಸಾ ನಿವೃತ್ತಿಃ ॥

ತಾ॥ ಕಂಠದ ಒಳಗಿನ ಭಾಗದಲ್ಲಿ ಸಂಯಮವು ಮಾಡುವುದರಿಂದ ಹಸಿವು ಬಾಯಾರಿಕೆಗಳು ನಿವಾರಣೆಯಾಗುತ್ತವೆ.

ವಿ॥ ಕಂಠದ ಒಳಗಿನ ಭಾಗದಲ್ಲಿ ಪ್ರಾಣಾದಿವಾಯುಗಳ ಸ್ಪರ್ಶೆಯಿಂದ ಹಸಿವು ಬಾಯಾರಿಕೆಗಳನ್ನುಂಟುಮಾಡುವ ಗುಣಿಯಾಗಿರುವ ಪ್ರದೇಶದಲ್ಲಿ ಸಂಯಮವನ್ನು ಮಾಡುವುದರಿಂದ ಪ್ರಾಣಾದಿಗಳ ಸ್ಪರ್ಶೆಯು ತಪ್ಪಿಹೋಗಿ ಕ್ಷುತ್ಪಿಪಾಸಾ ನಿವೃತ್ತಿಯಾಗುತ್ತದೆ.

**ಅ॥ ದೇಹಸ್ಥೈರ್ಯ ಸಿದ್ಧಿಯನ್ನು ಹೇಳುತ್ತಾರೆ.**

೩೨. ಸೂ॥ ಕೂರ್ಮ ನಾ ಡ್ಯಾಂ ಸ್ಥೈರ್ಯಮ್ ॥

ತಾ॥ ಕಂಠದ ಕೆಳಭಾಗದಲ್ಲಿರತಕ್ಕ ಕೂರ್ಮ ನಾಡಿಯಲ್ಲಿ ಸಂಯಮವನ್ನು ಮಾಡುವುದರಿಂದ ಸ್ಥೈರ್ಯವು ಹುಟ್ಟುತ್ತದೆ.

ವಿ॥ ಕೂರ್ಮನಾಡೀ ಸಂಯಮದಿಂದ ದೇಹಕ್ಕೂ ಶರೀರದ ಒಳಗೆ ಕೋಶ, ಧಾತು, ನಾಡೀ, ಚಕ್ರಾದಿಗಳಿಗೂ ಸ್ವಸ್ಥತೆ ಹುಟ್ಟುತ್ತದೆ.

**ಅ॥ ದೇವತಾ ಸಿದ್ಧಪುರುಷ ಸಂದರ್ಶನ ಸಿದ್ಧಿಯನ್ನು ಹೇಳುತ್ತಾರೆ.**

೩೩. ಸೂ॥ ಮೂರ್ಧ ಜ್ಯೋತಿಷಿ ಸಿದ್ಧ. ದರ್ಶನಮ್ ॥

ತಾ॥ ಶಿರಸ್ಸಿನೊಳಗೆ ಬ್ರಹ್ಮರಂಧ್ರವೆಂಬ ಸ್ಥಳದಲ್ಲಿ ಪ್ರಕಾಶಾತ್ಮಕವಾದ ಸುಷುಮ್ನಾಂತದಲ್ಲಿರತಕ್ಕ ಮಹಾ ತೇಜಸ್ಸಿನಲ್ಲಿ ಸಂಯಮವನ್ನು ಮಾಡಿದ ಮೇಲೆ ಸಿದ್ಧಪುರುಷರು ಮೊದಲಾದಂಥ ಮಹಾತ್ಮರ ದರ್ಶನವು ಹುಟ್ಟುತ್ತದೆ.

ವಿ॥ ಗರ್ಭಗುಡಿಯಲ್ಲಿ ಅಖಂಡಜ್ಯೋತಿಯ ಪ್ರಭೆ, ಬಾಗಿಲಿನ ರಂಧ್ರದಿಂದ ಈಚೆಗೆ ಬಂದಹಾಗೆ, ಶಿರಸ್ಸಿನೊಳಗೆ ಸಹಸ್ರಾರದಲ್ಲಿ ಜ್ಯೋತಿರ್ಮಯವಾದ

ಶುದ್ಧ ಸಾತ್ವಿಕ ಪ್ರಕಾಶವು ಸಹಸ್ರಾರದ ಕೆಳಗಿನ ಭಾಗದಲ್ಲಿರುವ ಬ್ರಹ್ಮ ರಂಧ್ರದ ಮೂಲಕ ಈಚೆಗೆ ಹೊಳೆಯುತ್ತಿರುತ್ತದೆ. ಆ ಪ್ರಭೆಯಲ್ಲಿ ಸಂಯಮವನ್ನು ಮಾಡುವುದರಿಂದ ಅಂತರಿಕ್ಷದಲ್ಲಿ ಸಂಚರಿಸುವ ದೇವತೆಗಳು, ಸಿದ್ಧಪುರುಷರು ಮೊಲಾದ ಮಹಾತ್ಮರ ದರ್ಶನವೂ, ಅವರಲ್ಲಿ ಸಂಭಾಷಿಸುವುದೂ ಆಗುತ್ತದೆ. ಮತ್ತು ಆ ಪ್ರದೇಶದ ಚಿತ್ತದಲ್ಲಿ ಸಂಸ್ಕಾರರೂಪವಾಗಿರುವ ಚಿಹ್ನೆಗಳಲ್ಲಿ ಸಂಯಮವನ್ನು ಮಾಡುವುದರಿಂದ ಯಾವ ಜನ್ಮದಲ್ಲಿಯೇ ಆಗಲಿ, ತಾನು ನೋಡಿರತಕ್ಕವರನ್ನು ನೋಡಬಹುದು.

**ಅ|| ಸರ್ವಜ್ಞತ್ವ ಸಿದ್ಧಿಯನ್ನು ಹೊಂದುವುದಕ್ಕೆ ಉಪಾಯವನ್ನು ಹೇಳುತ್ತಾರೆ.**

೩೪. ಸೂ|| ಪ್ರಾತಿಭಾದ್ವಾ ಸರ್ವಮ್ ||

ತಾ|| ಪ್ರತಿಭೆಯಲ್ಲಿಯಾಗಲಿ, ಈ ಪ್ರತಿಭೆಯ ಸಂಬಂಧವಾದ ಪ್ರಾತಿಭೆಯಲ್ಲಿಯಾಗಲಿ, ಸಂಯಮವನ್ನು ಮಾಡುವುದರಿಂದ ಸಮಸ್ತವು ಗೋಚರವಾಗುವುದು.

ವಿ|| ಚಿತ್ತದ ಸತ್ತ್ವಭಾಗದಲ್ಲಿ ನೆಲೆಸಿರತಕ್ಕ ಚಿತ್ತದ ಪ್ರಭೆ (ಚಿತ್ಪ್ರಭೆ) ಪ್ರತಿಭವೆನ್ನಲ್ಪಡುವುದು. ಅಂದರೆ ಜ್ಞಾತೃತ್ವಗಳಾದ ಶುದ್ಧ ಜ್ಞಾನವು; ಇಲ್ಲವೇ ಪ್ರತಿಬಿಂಬವು ಪ್ರತಿಭ ಎನ್ನಲ್ಪಡುತ್ತದೆ.

ಈ ಪ್ರತಿಬಿಂಬದಿಂದ ಅಂಕುರಿಸುತ್ತಿರುವ ಪ್ರಕಾಶಕಿರಣಗಳು, ಅಥವ ಬುದ್ಧಿಗೆ ಅನುದ್ದೇಶ್ಯವಾಗಿ ತಕ್ಷಣದಲ್ಲಿ ಹುಟ್ಟುವ ಜ್ಞಾನಕ್ಕೆ ಪ್ರಾತಿಭ ಎನ್ನಲ್ಪಡುವುದು. ಪ್ರತಿಭೆಯಲ್ಲಿಯಾಗಲಿ, ಪ್ರಾತಿಭೆಯಲ್ಲಿಯಾಗಲಿ, ಸಂಯಮವನ್ನು ಮಾಡುವುದರಿಂದ ಸಕಲ ವಿಷಯ ವಸ್ತು ವಿಚಾರಗಳನ್ನು ಚೆನ್ನಾಗಿ ತಿಳಿಯಬಹುದು.

ಬ್ರಹ್ಮರಂಧ್ರಕ್ಕೆ ಮೇಲ್ಭಾಗದಲ್ಲಿ, ಸಹಸ್ರಾರಕ್ಕೆ ಕೆಳಗೂ, ಚಿತ್ತದ ಸಾತ್ವಿಕಭಾಗವಾಗಿಯೂ; ಬ್ರಹ್ಮರಂಧ್ರ ಪ್ರಾಂತದ ಭಾಗವು ರಾಜಸಭಾಗವಾಗಿಯೂ; ಬ್ರಹ್ಮರಂಧ್ರದ ಕೆಳಗೆ ತಾಮಸಭಾಗವಾಗಿಯೂ; ನೆಲೆಸಿರುತ್ತೆ. ಈ ಪ್ರತಿಭಾಗದಲ್ಲಿಯೂ, ಪರಂಪರೆಯಾಗಿ ಚಿತ್ಪ್ರಭೆ ಸೇರಿರುತ್ತೆ. ಇವುಗಳಿಂದ ಚಿತ್ಪ್ರಭೆಗಳು ಹೊರಬೀಳುತ್ತವೆ. ಚಿತ್ಸಂಬಂಧವಾದ ಪ್ರತಿ ಪ್ರಭೆಗೂ, ಆ ಪ್ರಭೆಯನ್ನು ಹೊಂದಿಕೊಂಡಿರುವ ವಸ್ತ್ವನುಗುಣವಾಗಿ ಜ್ಞಾನವು ಹುಟ್ಟಿರುತ್ತದೆ. ಈ ಜ್ಞಾನವು ಅಂತಃಕರಣವಾಗಿದೆ. ಹೇಗೆಂದರೆ, ಶುದ್ಧ ಸತ್ತ್ವಭಾಗವಾದ ಪ್ರಭೆಗೆ ಪ್ರಜ್ಞೆಯೆಂದೂ, ಜ್ಞಾನವೆಂದೂ; ರಾಜಸ

ಭಾಗದ ಪ್ರಭೆಗೆ ಮನಸ್ಸೆಂದೂ; ತಾಮಸಭಾಗದ ಪ್ರಭೆಗೆ ಅಹಂಕಾರವೆಂದೂ; ಇವುಗಳಲ್ಲಿ ಎಲ್ಲವೂ ಅನಾದಿಯಾಗಿ ನೆಲೆಸಿರತಕ್ಕ, ಮತ್ತು ನೆಲೆಸಿಕೊಂಡು ಬರತಕ್ಕ, ಸಂಸ್ಕಾರರೂಪವಾದ ಚಿಹ್ನೆಗಳುಳ್ಳ ಭಾವಗಳಿಗೆ ಚಿತ್ತವೆಂದೂ ; ಈ ಶುದ್ಧ ಸಾತ್ವಿಕಾದಿ ಭಾಗಗಳಿಗೆ ಇವುಗಳ ಸ್ವಭಾವಾನುಸಾರವಾಗಿ ಜ್ಞಾತೃತ್ವಾದಿ ಹೆಸರುಗಳು ಹುಟ್ಟಿರುತ್ತವೆ. ಇವುಗಳೆಲ್ಲಕ್ಕೂ ಅಂತಃಕರಣ ವೆಂದೂ, ಚಿತ್ತವೆಂದೂ, ವ್ಯವಹಾರ.

ಇವುಗಳಲ್ಲಿ ಜ್ಞಾತೃವೆಂಬ ಕರಣಕ್ಕೆ ತ್ರಿಕಾಲಜ್ಞಾನವು, ಬುದ್ಧಿಗೆ ವರ್ತಮಾನಕಾಲವು, ಮನಸ್ಸಿಗೆ ಭವಿಷ್ಯತ್ಕಾಲ ಜ್ಞಾನವು; ಚಿತ್ತಕ್ಕೆ ಭೂತಕಾಲ ಜ್ಞಾನವು, ಅಹಂಕಾರಕ್ಕೆ ಅಜ್ಞಾನವು, ಎಂದು ಈ ರೀತಿ ಯಾಗಿ ಅಂತಃಕರಣಗಳಿಗೆ ಪ್ರತ್ಯೇಕ ಪ್ರತ್ಯೇಕ ಜ್ಞಾನಗಳಿವೆ. ಇವುಗಳಲ್ಲಿ ಬುದ್ಧ್ಯಾದಿ ನಾಲ್ಕೂ ಪ್ರಪಂಚಾನುವರ್ತನದಲ್ಲೇ ಇರುವುದರಿಂದಲೂ, ಮತ್ತು ತಮ್ಮ ತಮ್ಮ ಸ್ವರೂಪಗಳನ್ನು ತಿಳಿದುಕೊಳ್ಳದೆಯಿರುವುದರಿಂದಲೂ ಇವು ಅಂತಃಕರಣ ರೂಪವಾಗಿರತಕ್ಕದ್ದೇ ಆಗಿವೆ. ಜ್ಞಾತೃವು ಅಂತಃಕರಣ ವಾದರೂ, ಪ್ರಪಂಚ ವಿಷಯಗಳಿಗೆ ಸಾಕ್ಷಿಭೂತನಾಗಿರುವವನೇ ಹೊರತು ವಿಷಯಗಳಲ್ಲಿ ಅನುವರ್ತಿಸುವುದಿಲ್ಲವಾದ್ದರಿಂದ ಅಂತಃಕರಣವೆಂಬ ವ್ಯವ ಹಾರವಿಲ್ಲ. ಸೂರ್ಯೋದಯಕಾಲದಲ್ಲಿ ಸೂರ್ಯನಿಂದ ಕಿರಣಗಳು ಅಂಕುರಿ ಸುತ್ತಿರುವ ಹಾಗೆ ಜ್ಞಾತೃಸಂಬಂಧವಾದ ಪ್ರಜ್ಞೆ ಹುಟ್ಟುತ್ತದೆ. ಈ ಅಂಕುರಪ್ರಸರಣೆ ನಿರಂತರವೂ ಇದ್ದರೂ ಕೂಡ ಪ್ರಪಂಚವಾಸನೆಯಲ್ಲಿರ ತಕ್ಕ ಬುದ್ಧಿಗೆ ತಿಳಿಯುವುದಿಲ್ಲ.

[ಇದನ್ನು ಗುರುಮುಖವಾಗಿ ತಿಳಿದುಕೊಳ್ಳಬೇಕು ಪ್ರಾತಿಭ ಸಂಯಮವೇ ಗಾಯತ್ರೀ ವಿದ್ಯಾ ರಹಸ್ಯವಾಗಿದೆ.]

**ಅ॥ ತನ್ನ ಮತ್ತು ಇತರರ ಚಿತ್ತವಾಸನೆಗಳನ್ನು ತಿಳಿದುಕೊಳ್ಳುವ ಉಪಾಯವನ್ನು ಹೇಳುತ್ತಾರೆ.**

೩೫. ಸೂ॥ ಹೃದಯೇ ಚಿತ್ತ ಸಂವಿತ್ ॥

ತಾ॥ ಅಂತಃಕರಣಗಳಿಗೆ ಆಧಾರವಾದ ಶರೀರದ ಮಧ್ಯಪ್ರದೇ ಶದಲ್ಲಿ ಸಂಯಮವನ್ನು ಮಾಡುವುದರಿಂದ ತನ್ನ ಚಿತ್ತದಲ್ಲಿಯೂ ಮತ್ತು ಪರರ ಚಿತ್ತದಲ್ಲಿರತಕ್ಕ ವಿಷಯಗಳನ್ನು ತಿಳಿದುಕೊಳ್ಳಬಹುದು.

ವಿ॥ ಅಂತಃಕರಣದ ಸ್ಥಾನವಾದ ಹೃದಯ ಮಧ್ಯಭಾಗದಲ್ಲಿ ಅಧೋ ಮುಖ ವಾಗಿರುವ ಸೂಕ್ಷ್ಮಪುಂಡರೀಕಾಕಾರದಲ್ಲಿ ಸಂಯಮವನ್ನು ಮಾಡುವುದ

ರಿಂದ ತನ್ನ ಮತ್ತು ಪರರ ಚಿತ್ತದಲ್ಲಿರತಕ್ಕ ವಿಷಯ ಜ್ಞಾನವು (ಪೂರ್ವ ದಹರವಿದ್ಯೆ) ಹುಟ್ಟುತ್ತದೆ.

**ಅ|| ಜ್ಞಾತೃತ್ವ ಜ್ಞಾನ ಸಿದ್ಧಿಯನ್ನು ಹೇಳುತ್ತಾರೆ.**

೩೬. ಸೂ|| ಸತ್ತ್ವ ಪುರುಷಯೋರತ್ಯನ್ತಾ ಸಂಕೀರ್ಣಯೋಃ ಪ್ರತ್ಯಯಾ ವಿಶೇಷೋ ಭೋಗಃ ಪರಾರ್ಥಾತ್ಸ್ವಾರ್ಥ ಸಂಯಮಾತ್ಪುರುಷ ಜ್ಞಾನಮ್ ||

ತಾ|| ಕೇವಲ ಪರಸ್ಪರದಿಂದ ಬೇರೆಯಾಗದ ಪ್ರಕಾಶವಾಗಿರುವ ಭೋಗ್ಯರೂಪವಾದ ಬುದ್ಧಿತತ್ತ್ವದಲ್ಲಿ, ಸ್ವಾತ್ಮರೂಪನಾದ ಭೋಕ್ತ ವೆಂಬ ಜ್ಞಾತೃ ತತ್ವದಲ್ಲಿಯೂ, ತಾನು ಭೋಗ್ಯ ಭೋಕ್ತೃವೆಂಬ ಭೇದ ವಿಲ್ಲದೆ ಭೋಗವೆನ್ನಲ್ಪಡುವನು. ಭೋಗ್ಯವಾದ ಬುದ್ಧಿತತ್ತ್ವವು ತನಗೆ ಪ್ರಯೋಜನವೆಂಬ ಜ್ಞಾನವನ್ನು ಬಿಟ್ಟು ಭೋಕ್ತೃರೂಪನಾದ ಪುರುಷನಿಗೆ ಭೋಗವನ್ನು ಸಂಪಾದಿಸಿ ಕೊಡುವೆನೆಂಬ ಜ್ಞಾನದಿಂದ ಜ್ಞಾತೃವಿನಲ್ಲಿ ಸಂಯುಮವನ್ನು ಮಾಡುವುದರಿಂದ ಪುರುಷನ ಜ್ಞಾನವು ಹುಟ್ಟುತ್ತದೆ.

ವಿ|| ಭೋಗ್ಯ ಭೋಕ್ತೃಗಳ ಪರಸ್ಪರ ಭೇದವನ್ನು ತಿಳಿಯದೆ ಇರುವುದು ಭೋಗವು. ಈ ಅಜ್ಞಾನವನ್ನು ಬಿಟ್ಟು ; ಬುದ್ಧಿ ಭೋಗ್ಯವು, ಪುರುಷನು ಭೋಕ್ತೃವೆಂಬ ವ್ಯವಹಾರಕ್ಕೆ ಒಳಪಟ್ಟಿದ್ದಾನೆಂಬ ತಿಳಿವಳಿಕೆಯಿಂದ ಚಿತ್ಸ್ವರೂಪನಾದ ಪುರುಷನಲ್ಲಿ ಸಂಯಮವನ್ನು ಮಾಡುವುದರಿಂದ ಸ್ವಸ್ವ ರೂಪನಾದ ಪುರುಷನ ಜ್ಞಾನವು ಹುಟ್ಟುತ್ತದೆ.

**ಅ|| ಸ್ವಾತ್ಮರೂಪನಾದ ಪುರುಷನ ಸಂಯುಮದ ಫಲವನ್ನು ಹೇಳುತ್ತಾರೆ.**

೩೭. ಸೂ|| ತತಃ ಪ್ರಾತಿಭ ಶ್ರಾವಣ ವೇದನಾ ದರ್ಶಾ ಸ್ವಾದ ವಾರ್ತಾ ಜಾಯನ್ತೇ ||

ತಾ|| ಆಸ್ವಾತ್ಮ ಸಂಯಮಾಭ್ಯಾಸದಿಂದ ಹುಟ್ಟಿದ ಪ್ರತಿಭ ಜ್ಞಾನದಿಂದ ದಿವ್ಯಜ್ಞಾನವು, ದಿವ್ಯ ಸ್ಪರ್ಶಜ್ಞಾನವು, ದಿವ್ಯ ರೂಪ ಜ್ಞಾನವು, ದಿವ್ಯ ರಸಜ್ಞಾನವು, ದಿವ್ಯ ಗಂಧಜ್ಞಾನವು ಹುಟ್ಟುತ್ತದೆ.

ವಿ|| ಸ್ವಾತ್ಮ ಪುರುಷ ಸಂಯಮದಿಂದ ಪ್ರಾತಿಭ ಜ್ಞಾನವು ಹುಟ್ಟಿ ಅದರಿಂದ ಲೋಕಾಂತರಗಳಲ್ಲಿರತಕ್ಕ ದೇವತೆಗಳು ಮೊದಲಾದಂಥವರ ಕೂಡ ಮಾತ

ನಾಡುವಿಕೆ ಅವರನ್ನು ಮುಟ್ಟುವಿಕೆ, ಮತ್ತು ನೋಡುವಿಕೆ ಮೊದಲಾದುವುಗಳು ಸಂಪ್ರಾಪ್ತಿಸುತ್ತವೆ.

[ಪ್ರಾತಿಭೆಯನ್ನು ಕುರಿತು ಇದೇ ಪಾದದಲ್ಲಿ ೩೪-ನೇ ಸೂತ್ರದಲ್ಲಿ ಹೇಳಲ್ಪಟ್ಟಿತು. ೩೫-ನೇ ಸೂತ್ರದಲ್ಲಿ ಹೇಳಲ್ಪಟ್ಟ ಜ್ಞಾನವು ಇಹಲೋಕದ ಸಂಬಂಧವನ್ನು ಮಾತ್ರ ಅನುಸರಿಸುತ್ತದೆ.]

**ಅ|| ಇದುವರೆಗೂ ಹೇಳಲ್ಪಟ್ಟ ಸಂಯಮ ಸಿದ್ಧಿಗಳ ಗುಣದೋಷಗಳನ್ನು ನಿರೂಪಿಸುತ್ತಾರೆ.**

೩೮. ಸೂ|| ತೇ ಸಮಾಧಾ ವುಪಸರ್ಗಾ ವ್ಯುತ್ಥಾನೇ ಸಿದ್ಧಯಃ||

ತಾ|| ಇದುವರೆಗೂ ಹೇಳಲ್ಪಟ್ಟ ಸಿದ್ಧಿಗಳಿಂದ ಉಂಟಾದ ಫಲಗಳು ಸಮಾಧಿಯ ಅಭಿವೃದ್ಧಿಯಲ್ಲಿ ವಿಘ್ನರೂಪಗಳಾಗಿವೆ. ಸಮಾಧಿಯನ್ನು ಬಿಟ್ಟ ಕಾಲದಲ್ಲಿ ಫಲರೂಪಗಳಾಗಿವೆ.

ವಿ|| ಸಮಾಧಿಯನ್ನು ಅಭಿವೃದ್ಧಿಮಾಡಿಕೊಳ್ಳುವುದಕ್ಕೆ ಸಂಯಮದಿಂದ ಹುಟ್ಟಿದ ಫಲಗಳು ವಿಘ್ನಕಾರಿಗಳಾಗಿವೆ. ಆದ್ದರಿಂದ ನಿರತಿಶಯಾನಂದರೂಪವಾದ ಕೈವಲ್ಯ ಮಹಾಪದವಿಯನ್ನು ಅಪೇಕ್ಷಿಸುವ ಯೋಗಿ ತುಚ್ಛವಾದಂಥವುಗಳು, ಇತರರಿಂದ ಮಹಾಪುರುಷನೆಂದೆನ್ನಿಸಿಕೊಳ್ಳುವುದಕ್ಕೆ ತಕ್ಕಂಥವುಗಳನ್ನು ಬಿಟ್ಟು ಸದ್ಗತಿಯನ್ನು ಹೊಂದುವ ಮಾರ್ಗವನ್ನು ಪ್ರವೇಶಿಸಬೇಕು.

**ಅ|| ಪರಕಾಯ ಪ್ರವೇಶವನ್ನು ಹೇಳುತ್ತಾರೆ.**

೩೯. ಸೂ|| ಬನ್ಧಕಾರಣ ಶೈಥಿಲ್ಯಾತ್ಪ್ರಚಾರ ಸಂವೇದನಾಚ್ಚ ಚಿತ್ತಸ್ಯ ಪರ ಶರೀರಾವೇಶಃ ||

ತಾ|| ಚಿತ್ತವೂ, ಪುರುಷನೂ, ಅಜ್ಞಾನ ಮೂಲಕವಾದ ಕರ್ಮಶೇಷದಿಂದ ಶರೀರದಲ್ಲಿ ಬಂಧಿಸಲ್ಪಟ್ಟದ್ದರಿಂದಲೂ, ಅದಕ್ಕೆ ಕಾರಣವಾದ ಪುಣ್ಯಪಾಪ ಕರ್ಮಗಳು ನಶಿಸಿಹೋಗುವುದರಿಂದಲೂ, ಚಿತ್ತವು ಹೃದಯ ಪ್ರದೇಶದಲ್ಲಿ ಇಂದ್ರಿಯಗಳ ಮೂಲಕ ವಿಷಯಗಳಲ್ಲಿ ಪ್ರಸರಿಸತಕ್ಕ ಸಾಮರ್ಥ್ಯವುಳ್ಳದ್ದಾಗಿರುವುದರಿಂದಲೂ, ಇತರರ ಶರೀರಗಳಲ್ಲಿ ಪ್ರವೇಶಿಸುತ್ತದೆ.

ವಿ|| ಚಿತ್ತವೂ, ಪುರುಷನು ಕೂಡ ವ್ಯಾಪಕರಾಗಿದ್ದರೂ, ಅಜ್ಞಾನ ಮೂಲಕವಾಗಿ ಕರ್ಮದಿಂದ ಭೋಗ್ಯ, ಭೋಕ್ತೃಗಳೆನ್ನಿಸಿಕೊಂಡಿರುವುದಕ್ಕೆ ಕಾರಣ

ವಾಗಿರುವ ಪುಣ್ಯಾಪಾಪಗಳು ಸಮಾಧಿ ಬಲದಿಂದ ಕ್ಷೀಣಿಸುತ್ತಾ ಬರುವುದರಿಂದಲೂ, ಚಿತ್ತವು ಇಂಥಾ ಪ್ರದೇಶದಲ್ಲಿ ಇಂಥಾ ನಾಡಿಯನ್ನು ಆಶ್ರಯಿಸಿಕೊಂಡಿದೆ. ಇಂಥಾ ನಾಡಿಗಳ ಮಾರ್ಗವಾಗಿ ಇಂದ್ರಿಯಗಳ ಮೂಲಕ ವಿಷಯಗಳನ್ನು ತಿಳಿದುಕೊಳ್ಳುತ್ತದೆ. ಮತ್ತು ಇಂದ್ರಿಯಗಳನ್ನು ಪ್ರಾಣಾದಿ ವಾಯುಗಳನ್ನು ವಹಿಸಿಕೊಂಡಿರುವ ನಾಡಿಗಳು ಈರೀತಿಯಾಗಿರುತ್ತವೆಂದು ತನ್ನ ಶರೀರದಲ್ಲಿಯೂ, ಇತರರ ಶರೀರದಲ್ಲಿಯೂ, ಸಂಚಾರಮಾಡುವ ಸಂದರ್ಭಗಳನ್ನೆಲ್ಲ ಚೆನ್ನಾಗಿ ತಿಳಿದುಕೊಳ್ಳುವುದರಿಂದಲೂ, ಬದಿಕಿರತಕ್ಕ ದೇಹಗಳಲ್ಲಿಯಾಗಲಿ, ನಿರ್ಜೀವ ಕಳೇಬರಗಳಲ್ಲಿಯಾಗಲಿ, ತನ್ನ ಇಚ್ಛಾನುಸಾರವಾಗಿ ಚಿತ್ತವು ಇಂದ್ರಿಯ ಪ್ರಾಣಗಳಕೂಡ ಸುಖಕರವಾಗಿ ಪ್ರವೇಶಿಸುತ್ತದೆ. ಸಮಾಧಿಯ ಬಲದಿಂದ ಪಾಪವು ನಾಶವಾಗಿರುತ್ತದೆ. ಆದ ಕಾರಣ ತಾನು ಪ್ರವೇಶಿಸಿದ ಘಟದಲ್ಲಿಯೂ, ಅದೇ ರೀತಿಯಾಗಿ ಸುಖವಾಗಿರುತ್ತಾನೆ. ಮತ್ತೆ ತನ್ನ ಶರೀರಕ್ಕೆ ಬರುತ್ತಾನೆ. ಹೀಗೆ ಪರಕಾಯ ಪ್ರವೇಶಕ್ಕೆ ಕಾರಣವಾಗಿರತಕ್ಕದ್ದು ಲಿಂಗದೇಹವಾಗಿದೆ. ಈ ಲಿಂಗದೇಹವನ್ನು ಸ್ವಾಧೀನಮಾಡಿಕೊಳ್ಳುವಿಕೆ ಉಪಕೋಶಲವಿದ್ಯೆಗೆ ಸಂಬಂಧಿಸತಕ್ಕದ್ದೆಂದು ತಿಳಿಯಬೇಕು.

**ಅ॥ ಉದಾನ ವಾಯು ಸಂಯಮದ ಫಲವನ್ನು ಹೇಳುತ್ತಾರೆ.**

೪೦. ಸೂ.॥ ಉದಾನ ಜಯಾ ಜ್ಜಲ ಪಙ್ಕ ಕಣ್ಟ ಕಾದಿಷ್ವಸಙ್ಗ ಉತ್ಕ್ರಾಂತಿಶ್ಚ ॥

ತಾ॥ ಉದಾನವಾಯುವನ್ನು ಸಂಯಮಮಾಡಿ ಜಯಿಸುವುದರಿಂದ ಜಲದಲ್ಲಿಯೂ, ಕೆಸರಿನಲ್ಲಿಯೂ, ಮುಳ್ಳುಗಳಲ್ಲಿಯೂ, ಸಂಬಂಧವಿರುವುದಿಲ್ಲ.

ವಿ॥ ಉದಾನ ವಾಯುವನ್ನು ಜಯಿಸುವುದರಿಂದ ಮಹಾ ಪ್ರವಾಹಾದಿ ಜಲದಲ್ಲಿ ಮುಳುಗದೆಯೂ, ಕೆಸರಿರತಕ್ಕ ವಾಪೀ, ಕೂಪ, ತಟಾಕಾದಿಗಳಲ್ಲಿ ಹೂಣದೆಯು, ಬಹಳ ಸೂಕ್ಷ್ಮವಾದ ಕೊನೆಗಳುಳ್ಳ ಮುಳ್ಳು ಕತ್ತಿಗಳು, ಕಾಠಾರಿಗಳು, ಮೊದಲಾದುವುಗಳ ಮೇಲೆ ನಿಂತುಕೊಂಡರೆ, ಚುಚ್ಚುಕೊಳ್ಳದೆಯು ಮತ್ತು ಯಾವುದನ್ನೂ ಅಂಟಿಕೊಳ್ಳದೆಯೂ ಇರುತ್ತದೆ.

ಈ ಉದಾನವಾಯುವು ದೇಹದ ಹಿಂಭಾಗದಲ್ಲಿ ಭುಜ ಶಿರಸ್ಸು ಮೊದಲು ಶಿರಸ್ಸಿನ ಒಳ ಭಾಗದಲ್ಲಿ ಸುಳಿ ಗುಣಿಯವರೆಗೆ ಸಮಸ್ತ ವೃತ್ತಿಗಳನ್ನು ಮೇಲಕ್ಕೆ ಆಕರ್ಷಿಸುವ ಶಕ್ತಿಯುಳ್ಳದ್ದು.

**ಅ॥ ಸಮಾನವಾಯು ಸಂಯಮದ ಫಲವನ್ನು ಹೇಳುತ್ತಾರೆ.**

೪೧. ಸೂ॥ ಸಮಾನ ಜಯಾತ್ಪ್ರ ಜ್ವಲನಮ್ ॥

ತಾ॥ ಸಮಾನವಾಯುವನ್ನು ಸಂಯಮಮಾಡಿ ಜಯಿಸುವುದರಿಂದ, ಇಲ್ಲವೇ ಸ್ವಾಧೀನ ಮಾಡಿಕೊಳ್ಳುವುದರಿಂದ, ಅಥವ ವಶೀಕಾರದಿಂದ, ಮಹಾ ತೇಜಸ್ಸಂಥಾ ಕಾಂತಿ ಹುಟ್ಟುತ್ತದೆ.

ವಿ॥ ಸಮಾನವಾಯುವನ್ನು ಜಯಿಸುವುದರಿಂದ ಯೋಗಿಯ ಶರೀರವು ಅಧಿಕ ಪ್ರಕಾಶಮಾನವಾಗುತ್ತದೆ. ಈ ಸಮಾನವಾಯುವು ನಾಭಿಪ್ರದೇಶದಲ್ಲಿ ಜಠರಾಗ್ನಿಯನ್ನು ಆವರಿಸಿಕೊಂಡು ಊಟಮಾಡಿದ ಅನ್ನವನ್ನು ಪಾಕ ಮಾಡುತ್ತಾ ಇರುತ್ತದೆ.

**ಅ॥ ದೂರ ಶ್ರವಣ ಕಾರಣ ಸಿದ್ಧಿಯನ್ನು ಹೇಳುತ್ತಾರೆ**

೪೨. ಸೂ॥ ಶ್ರೋತ್ರಾ ಕಾಶಯೋಃ ಸ್ಸಂಬನ್ಧ ಸಂಯಮಾದ್ದಿವ್ಯಂ ಶ್ರೋತ್ರಮ್ ॥

ತಾ॥ ಶ್ರೋತ್ರೇಂದ್ರಿಯವನ್ನು; ಅವಕಾಶವಾಗಿರತಕ್ಕ ಆಕಾಶವನ್ನು, ಇವುಗಳ ದೇಶ ದೇಶಿ ಭಾವ ಲಕ್ಷಣಗಳಿರತಕ್ಕ ಸಂಬಂಧದಲ್ಲಿ ಸಂಯಮವನ್ನು ಮಾಡುವುದರಿಂದ ದಿವ್ಯ ಶ್ರೋತ್ರೇಂದ್ರಿಯವು ಹುಟ್ಟುತ್ತದೆ.

ವಿ॥ ಶ್ರೋತ್ರೇಂದ್ರಿಯ ನಾಡಿಗೂ, ಆಕಾಶಕ್ಕೂ ಇರತಕ್ಕ ಸಂಬಂಧದಲ್ಲಿ ಅಂದರೆ ಶ್ರೋತ್ರೇಂದ್ರಿಯವನ್ನು ವಹಿಸಿಕೊಂಡಿರುವ ನಾಡಿಯ ಆಕಾಶವನ್ನು ಕೂಡಿರುವ ಸ್ಥಳದಲ್ಲಿ ಸಂಯಮವನ್ನು ಮಾಡಿದ ಮೇಲೆ ದೇವತೆಗಳಿಗಿರತಕ್ಕ ಶ್ರೋತ್ರೇಂದ್ರಿಯ ಶಕ್ತಿಹುಟ್ಟಿ ಅತಿ ದೂರದಲ್ಲಿರತಕ್ಕ ಶಬ್ದಗಳೂ ಕೂಡ ಕೇಳಿಸುತ್ತದೆ.

**ಅ॥ ಆಕಾಶ ಗಮನ ಸಿದ್ಧಿಯನ್ನು ಹೇಳುತ್ತಾರೆ.**

೪೩. ಸೂ॥ ಕಾಯಾ ಕಾಶಯೋಃ ಸ್ಸಂಬನ್ಧ ಸಂಯಮಾಲ್ಲಘು ತೂಲ ಸಮಾಪತ್ತೇಃ ಶ್ಚಾಕಾಶ ಗಮನಮ್ ॥

ತಾ॥ ಶರೀರಾಕಾಶ ಸಂಬಂಧದಲ್ಲಿ ಸಂಯಮವನ್ನು ಮಾಡುವುದರಿಂದ ಭಾರವಿಲ್ಲದೆ ಹತ್ತಿಯಹಾಗೆ ಆಕಾಶದಲ್ಲಿ ಸಂಚರಿಸುವಿಕೆ ಹುಟ್ಟುತ್ತದೆ.

ವಿ॥ ಪಾಂಚಭೌತಿಕ ಶರೀರವು, ನಿರಾಧಾರವಾದ ಆಕಾಶವು, ಅಂದರೆ ಶರೀರ ವನ್ನು ಆಕ್ರಮಿಸಿಕೊಂಡಿರುವ ಆಕಾಶದಲ್ಲಿ ಮಾಡುವ ಸಂಯಮದಿಂದ ಹತ್ತಿಯಹಾಗೆ ಶರೀರವು ಲಘುವಾಗುತ್ತದೆ. ಆಗ ತನಗಿಷ್ಟವಾದ ಕಡೆಗೆ ಆಕಾಶ ಮಾರ್ಗವಾಗಿ ಹೋಗಬಹುದು.

**ಅ॥ ಸಬೀಜ ನಿರ್ಬೀಜ ಸಮಾಧಿಗಳ ಸಿದ್ಧಿಗೋಸ್ಕರ ಕ್ಲೇಶಕರ್ಮನಿವೃತ್ತಿ ಸಿದ್ಧಿಯನ್ನು ಭೋಧಿಸುತ್ತಾರೆ.**

೪೪. ಸೂ॥ ಬಹಿರ ಕಲ್ಪಿತಾ ವೃತ್ತಿರ್ಮಹಾ ವಿದೇಹಾ ತತಃ
ಪ್ರಕಾಶಾ ವರಣ ಕ್ಷಯಃ ॥

ತಾ॥ ಶರೀರದ ಆಚೆ ಶರೀರಾಪೇಕ್ಷೆಯಿಲ್ಲದ ಚಿತ್ತವೃತ್ತಿ ದೇಹಾ ಹಂಕಾರವಿಲ್ಲದ ಮಹಾವಿದೇಹವೆನ್ನಲ್ಪಡುತ್ತದೆ. ಆ ಮಹಾವಿದೇಹ ವೆಂಬ ಹೆಸರುಳ್ಳ ಚಿತ್ತವೃತ್ತಿಯಲ್ಲಿ ಸಂಯಮವನ್ನು ಮಾಡುವುದರಿಂದ ಪ್ರಕಾಶರೂಪವಾದ ಚಿತ್ತವನ್ನು ಸುತ್ತಿಕೊಂಡಿರುವ ಮಲಿನರೂಪವಾದ ಕ್ಲೇಶಕರ್ಮಾದಿಗಳು ನಶಿಸಿಹೋಗುತ್ತವೆ.

ವಿ॥ ಶರೀರಾಹಂಕಾರಗಳಲ್ಲಿ ಕೂಡಿರುವ ಚಿತ್ತದ ಬಾಹ್ಯವೃತ್ತಿ ಕಲ್ಪಿತವೆನ್ನಲ್ಪಡು ತ್ತದೆ. ಶರೀರಾಹಂಕಾರಗಳನ್ನು ಬಿಟ್ಟಿರುವ ಚಿತ್ತದ ಬಾಹ್ಯವೃತ್ತಿ ಮಹಾ ವಿದೇಹವೆನ್ನಲ್ಪಡುತ್ತದೆ. ಮಹಾವಿದೇಹ ವೃತ್ತಿಯಲ್ಲಿ ಮಾಡುವ ಸಂಯಮ ದಿಂದ ಕ್ಲೇಶಾದಿ ಮಲಗಳು ನಿವರ್ತಿಸುತ್ತದೆ.

**ಅ॥ ಇದುವರೆಗೂ ವಿವಿಧ ಸಿದ್ಧಿಗಳನ್ನು ಬೋಧಿಸಿ ಈಗ ಯೋಗಿಗೆ ಸ್ವರೂಪದರ್ಶನೋಪಯೋಗವಾದ ಸಬೀಜ ನಿರ್ಬೀಜ ಸಮಾಧಿ ಸಿದ್ಧಿಗಾಗಿ ವಿವಿದೋಪಾಯವನ್ನು ಬೋಧಿಸುವುದಕ್ಕೋಸ್ಕರ ಪ್ರಥಮದಲ್ಲಿ ಪಂಚಭೂತ ಜಯೋಪಾಯವನ್ನು ಹೇಳುತ್ತಾರೆ.**

೪೫. ಸೂ॥ ಸ್ಥೂಲ ಸ್ವರೂಪ ಸೂಕ್ಷ್ಮಾನ್ವಯಾರ್ಥವತ್ವ
ಸಂಯಮಾ ದ್ಭೂತ ಜಯಃ ॥

ತಾ॥ ಪೃಥಿವ್ಯಾದಿ ಪಂಚಭೂತಗಳಲ್ಲಿಯೂ, ಅವುಗಳ ಸ್ವರೂಪ ದಲ್ಲಿಯೂ, ಗಂಧಾದಿ ಪಂಚತನ್ಮಾತ್ರಗಳಲ್ಲಿಯೂ, ಅವುಗಳ ಕ್ರಿಯೆ ಯಲ್ಲಿಯೂ, ಭೋಗಾಪವರ್ಗ ರೂಪಶಕ್ತಿಯಲ್ಲಿಯೂ, ಕ್ರಮವಾಗಿ ಸಂಯಮವನ್ನು ಮಾಡುವುದರಿಂದ ಪಂಚಭೂತಗಳ ಜಯವು ಆಗುತ್ತದೆ.

**ಅ|| ಪಂಚ ಭೂತಗಳನ್ನು ಜಯಿಸುವುದರಿಂದ ಆಗುವ ಫಲವನ್ನು ಹೇಳುತ್ತಾರೆ.**

೪೬. ಸೂ|| ತತೋಽಣಿ ಮಾದಿ ಪ್ರಾದುರ್ಭಾವಃ ಕಾಯಸಂ
ಪದ್ಧರ್ಮಾನಭಿ ಘಾತಶ್ಚ ||

ತಾ|| ಆ ಭೂತ ಜಯಸಿದ್ಧಿಯಿಂದ ಅಣಿಮಾದ್ಯಷ್ಟಸಿದ್ಧಿಗಳೂ, ದೇಹಸಂಪತ್ತೂ, ದೇಹರೂಪಾದಿಗಳು ಶಾಶ್ವಿತವಾಗಿರುವಿಕೆಯೂ, ಸಂಭವಿಸುತ್ತವೆ.

ವಿ|| ಪಂಚ ಭೂತಜಯದಿಂದ, ಅಣಿಮಾದ್ಯಷ್ಟ ಸಿದ್ಧಿಗಳೂ, ರೂಪಲಾವಣ್ಯಾದಿ ದೇಹ ಸಂಪದೆಯೂ, ದೇಹದಾರ್ಢ್ಯಾದಿಗಳೂ, ಸ್ಥಿರವಾಗಿರುವುದು ಆಗುತ್ತವೆ. (ದೇಹಸಂಪತ್ತನ್ನು ಕುರಿತು ಕೆಳಗಿನ ಸೂತ್ರದಲ್ಲಿ ವಿವರಿಸಲ್ಪಡುವುದು.)

ಅಣಿಮಾದ್ಯಷ್ಟ ಸಿದ್ಧಿಗಳ ವಿವರ.

೧. ಪರಮಾಣುವುಗಿಂತ ಸೂಕ್ಷ್ಮವಾಗುವಿಕೆ ಅಣಿಮ.

೨. ಮಹತ್ತಿಗಿಂತಲೂ ದೊಡ್ಡದಾಗುವಿಕೆಗೆ ಮಹಿಮ.

೩. ಭಾರಕ್ಕಿಂತಲೂ ಭಾರವಾಗುವಿಕೆಗೆ ಗರಿಮ.

೪. ಹತ್ತಿಯ ಕಣಕ್ಕಿಂತಲೂ ಹಗುರವಾಗುವಿಕೆಗೆ ಲಘಿಮ.

೫. ಸೂರ್ಯ ಚಂದ್ರಾದಿಗಳನ್ನು ಕೂಡ ಅನಾಯಾಸವಾಗಿ ಮುಟ್ಟುವಂಥ ಶಕ್ತಿ ಹುಟ್ಟುವಿಕೆಗೆ ಪ್ರಾಪ್ತಿ.

೬. ತಾನು ನೆನೆದ ಹಾಗೆ ಆಗುವಿಕೆಗೆ ಪ್ರಾಕಾಮ್ಯ.

೭. ಮಹಿಮೆಯುಳ್ಳಂಥವನಾಗುವಿಕೆಗೆ ಈಶತ್ವ.

೮. ಚರಾಚರಪ್ರಪಂಚವೆಲ್ಲವೂ ತನ್ನ ಆಜ್ಞೆಗೆ ಒಳಪಟ್ಟಿರುವಿಕೆಗೆ ವಶಿತ್ವ.

**ಅ|| ಪೂರ್ವೋಕ್ತ ಸೂತ್ರದಲ್ಲಿ ಹೇಳಲ್ಪಟ್ಟ ದೇಹಸಂಪದೆಯನ್ನು ವಿವರಿಸುತ್ತಾರೆ.**

೪೭. ಸೂ|| ರೂಪ ಲಾವಣ್ಯ ಬಲ ವಜ್ರ ಸಂಹನನತ್ವಾನಿ
ಕಾಯಸಂಪತ್ ||

ತಾ|| ರೂಪ, ಲಾವಣ್ಯ, ಬಲ, ಕಠಿನ, ಇವು ಶರೀರ ಸಂಪತ್ತೆನ್ನಲ್ಪಡುತ್ತೆ.

ವಿ|| ಮನ್ಮಥ ವಸಂತ ಜಯಂತಾದಿಗಳಿಗಿಂತಲೂ, ಮೀರಿದ ಸೌಂದರ್ಯವನ್ನು, ಸೂರ್ಯ ಚಂದ್ರಾಗ್ನಿಗಳಿಗೆ ಮೀರಿದ ಕಾಂತಿಯು, ಬ್ರಹ್ಮ, ವಿಷ್ಣು ರುದ್ರಾದಿಗಳಿಗೆ ಮೀರಿದ ಶಕ್ತಿಯು, ಪರ್ವತಗಳ ಪಕ್ಷಗಳನ್ನು ಭೇದಿಸಿದ ವಜ್ರವನ್ನು ಮೀರಿಸುವ ಕಠಿನತ್ವವು, ಶರೀರ ಸಂಪತ್ತೆನ್ನಲ್ಪಡುತ್ತೆ.

**ಅ|| ಇಂದ್ರಿಯ ಜಯವನ್ನು ಹೇಳುತ್ತಾರೆ.**

೪೮. ಸೂ|| ಗ್ರಹಣ ಸ್ವರೂಪಾಸ್ಮಿತಾನ್ವಯಾರ್ಥ ವತ್ವ ಸಂಯಮಾದಿನ್ದ್ರಿಯ ಜಯಃ ||

ತಾ|| ಇಂದ್ರಿಯ ವೃತ್ತಿಗಳಲ್ಲಿಯೂ, ಇಂದ್ರಿಯ ಪ್ರಕಾಶಗಳಲ್ಲಿಯೂ, ಅಸ್ಮಿತದಲ್ಲಿಯೂ, ಇಂದ್ರಿಯಗಳ ಪಾಟವು ಕಾರ್ಯವು ದಾರ್ಢ್ಯವು ಇವುಗಳಲ್ಲಿಯೂ, ಕ್ರಮವಾಗಿ ಸಂಯಮವನ್ನು ಮಾಡುವುದರಿಂದ ಇಂದ್ರಿಯಗಳು ತನ್ನ ಸ್ವಾಧೀನವಾಗುವುವು.

ವಿ|| ವಿಷಯಾಭಿ ಮುಖವಾಗಿರುವ ಇಂದ್ರಿಯವೃತ್ತಿಗಳಲ್ಲಿಯೂ, ಸಾಮಾನ್ಯವಾಗಿ ಇಂದ್ರಿಯ ಗೋಚರಗಳಲ್ಲಿಯೂ, ಅಹಂಕಾರ ಧರ್ಮವಾದ ನಾನು ತಿಳಿದುಕೊಂಡಿದ್ದೇನೆಂಬುದರಲ್ಲಿಯೂ, ಇಂದ್ರಿಯಗಳ ಪಾಟವು, ಕೆಲಸ, ದೃಢ, ಇವುಗಳಲ್ಲಿಯೂ, ಸಂಯಮವನ್ನು ಮಾಡುವುದರಿಂದ ಇಂದ್ರಿಯಜಯವು ಹುಟ್ಟುತ್ತದೆ.

**ಅ|| ಇಂದ್ರಿಯ ಜಯದ ಫಲವನ್ನು ಹೇಳುತ್ತಾರೆ.**

೪೯. ಸೂ|| ತತೋ ಮನೋಜವಿತ್ವಂ ವಿಕರಣ ಭಾವಃ ಪ್ರಧಾನ ಜಯಶ್ಚ ||

ತಾ|| ಇಂದ್ರಿಯ ಜಯದಿಂದ ಮನಸ್ಸಿನ ಹಾಗೆ ದೇಹದೊಳಗಿನ ಇಂದ್ರಿಯಗಳ ಗಮನಾ ಗಮನಾದಿಗಳು, ದೇಹದ ಬಾಹ್ಯೇಂದ್ರಿಯ ಪ್ರಚಾರಗಳು, ಮೂಲಪ್ರಕೃತಿಯ ಸ್ವಾಧೀನವು ಹುಟ್ಟುತ್ತದೆ.

ವಿ|| ಇಂದ್ರಿಯ ಸ್ವಾಧೀನದಿಂದ ಸ್ವೇಚ್ಛೆಯಾಗಿ ದೇಹದಲ್ಲಿ ಇಂದ್ರಿಯಗಳು ಸಂಚರಿಸುವಿಕೆಯು, ದೇಹಾಪೇಕ್ಷೆಯಿಲ್ಲದೆ ಬೇರೇಕಡೆ ಸಂಚಾರವು, ಅಂದರೆ, ಕಣ್ಣುಗಳನ್ನು ಮುಚ್ಚಿಕೊಂಡಿದ್ದರೂ ಕಾಣಿಸುವಿಕೆಯು, ಮೂಲಕಾರಣ ಜಯವು ಹುಟ್ಟುತ್ತದೆ. ಈ ಸಿದ್ಧಿಗಳು ಮಧುಪ್ರತೀಕಗಳೆನ್ನಲ್ಪಡುತ್ತೆ. ಅಂದರೆ ಜೇನು ಗೂಡಿನಲ್ಲಿ ಯಾವ ಕಡೆಯಲ್ಲಿಯಾದರೂ ಇರುವ ಜೇನು

ತುಪ್ಪವನ್ನು ತಿಂದರೆ ಯಾವ ರೀತಿ ಸಿಹಿಯಾಗಿರತ್ತದೋ ಹಾಗೆ ಒಂದು ಇಂದ್ರಿಯವನ್ನು ಜಯಿಸಿದರೆ ಆ ಇಂದ್ರಿಯಾನುಗುಣವಾದ ಸಿದ್ಧಿ ಮಹಾ ಸಂತೋಷಕರವಾದ ಹಾಗೆ ಇರುತ್ತದೆ.

**ಅ|| ಚಿತ್ತದ ಸಂಯಮವನ್ನು ಅದರ ಫಲವನ್ನು ಹೇಳುತ್ತಾರೆ.**

೫೦. ಸೂ|| ಸತ್ತ್ವಪುರುಷಾನ್ಯಥಾ ಖ್ಯಾತಿ ಮಾತ್ರಸ್ಯ ಸರ್ವ
ಭಾವಾಧಿಷ್ಠಾ ತೃತ್ವಂ ಸರ್ವಜ್ಞಾತೃತ್ವಂ ಚ ||

**ತಾ|| ಚಿತ್ತದ ಸಾತ್ತ್ವಿಕ ಭಾಗದಲ್ಲಿ ಸಂಯಮವನ್ನು ಮಾಡುವುದರಿಂದ; ಬುದ್ಧಿ, ಪುರುಷನು, ಬೇರೆ ಬೇರೆ ಎಂಬ ಜ್ಞಾನವು ಹುಟ್ಟುತ್ತದೆ. ಈ ಜ್ಞಾನವಿರುವವನಿಗೆ ಸಮಸ್ತವಾದ ಪ್ರಕೃತಿ ಪರಿಣಾಮಗಳಿಗೆ ತಾನು ಆಧಾರಭೂತನೆಂದೂ, ಅವುಗಳ ಜ್ಞಾನವಿರತಕ್ಕವನೆಂದೂ, ಬೋಧೆಯಾಗುವುದು.**

ವಿ|| ಚಿತ್ತ ಸಾತ್ತ್ವಿಕ ಪರಿಣಾಮದಲ್ಲಿ ಮಾಡುವ ಸಂಯಮದಿಂದ ಬುದ್ಧಿಯಲ್ಲಿ ಅನ್ಯಥಾ ಜ್ಞಾನ ಹುಟ್ಟುತ್ತದೆ. ಅಂದರೆ, ಬುದ್ಧಿಯೇ ಪುರುಷನು, ಇಲ್ಲವೇ ಆತ್ಮನೆಂಬ ಅಜ್ಞಾನವು ಹೋಗುತ್ತದೆ. ಮತ್ತು ಪ್ರಕೃತಿ ಪರಿಣಾಮಗಳಿಗೆ ಆಧಾರಭೂತನಾಗಿರುವಿಕೆಯು, ಸರ್ವ ಜ್ಞಾತೃತ್ವವು ಹುಟ್ಟುತ್ತದೆ. ಇಂಥ ಜ್ಞಾನಕ್ಕೆ ವಶೀಕಾರವೆಂದೂ, ಈ ಸಿದ್ಧಿಗೆ ವಿಶೋಕಾ ಎಂದೂ ಸಂಜ್ಞೆ ಹುಟ್ಟಿದೆ.

**ಅ|| ವಿಶೋಕಾ ಸಿದ್ಧಿಯನ್ನು ಹೇಳುತ್ತಾರೆ.**

೫೧. ಸೂ|| ತದ್ವೈರಾಗ್ಯಾದಪಿ ದೋಷಬೀಜ ಕ್ಷಯೇ
ಕೈವಲ್ಯಮ್ ||

ತಾ|| ಆ ವಿಶೋಕಾನಾಮಕ ಸಿದ್ಧಿಯಲ್ಲಿ ವೈರಾಗ್ಯವು ಹುಟ್ಟುವುದರಿಂದ ರಾಗಾದಿ ಕ್ಲೇಶಗಳಿಗೆ ಕಾರಣವಾದ ಅವಿದ್ಯೆ ನಾಶವಾಗಿ ಮುಕ್ತಿಯಾಗುತ್ತದೆ.

ವಿ|| ವಿಶೋಕಾದಿ ಸಿದ್ಧಿಯಲ್ಲಿ ವೈರಾಗ್ಯಮಾಡುವುದರಿಂದ ಕ್ಲೇಶಾದಿಗಳಿಗೆ ಬೀಜವಾದ ಅಜ್ಞಾನವು ಕ್ಷೀಣವಾಗಿ ಅದರಿಂದ ನಿರತಿಶಯಾನಂದ ಸ್ವರೂಪವಾದ ಕೈವಲ್ಯವು ಸಿದ್ಧಿಸುತ್ತದೆ.

**ಅ॥ ಯೋಗ ವಿಘ್ನಗಳಾಗುವುದನ್ನು ಪರಿಹರಿಸಬೇಕೆಂದು ಹೇಳುತ್ತಾರೆ.**

೫೨. ಸೂ॥ ಸ್ಥಾನ್ಯುಪನಿ ಮಂತ್ರಿಣೇ ಸಂಗಸ್ಮಯಾಕರಣಂ ಪುನರನಿಷ್ಟಂ ಪ್ರಸಂಗಾತ್ ॥

ತಾ॥ ದೇವತೆಗಳು ಭೋಜನವನ್ನು ಮಾಡಬೇಕೆಂದು ಪ್ರಾರ್ಥಿಸುವಾಗ, ಅಭಿಲಾಷೆಯನ್ನು ಆಶ್ಚರ್ಯವನ್ನು ಹೊಂದಬಾರದು. ಅಭಿಲಾಷೆಯನ್ನು ಹೊಂದಿದರೆ ಮತ್ತೆ ದುಃಖರೂಪವಾದ ಸಂಸಾರದ ಸಂಬಂಧವು ಹುಟ್ಟುತ್ತದೆ.

ವಿ॥ ಆಯಾ ತತ್ತ್ವಸ್ಥಾನಗಳಿಗೆ ಅಧಿಪತಿಗಳಾದ ತತ್ತ್ವಾಭಿರೂಪ ದೇವತೆಗಳು ಮೊದಲಾದವರು ಯೋಗಿಯ ಉತ್ಕೃಷ್ಟಪದವಿಗೆ ಸಹಿಸದವರಾಗಿ, ವಿಘ್ನ ಮಾಡಲೆನಿಸಿ, ನಮ್ಮಲ್ಲಿ ಊಟಮಾಡಿ ನಮ್ಮ ಕೋರಿಕೆಗಳನ್ನು ನೆರವೇರಿಸಬೇಕೆಂದು ಸ್ವರ್ಗಾದಿಲೋಕಾಂತರಗಳಲ್ಲಿರುವ ದಿವ್ಯ ಸ್ತ್ರೀಯರನ್ನು, ರಸಾಯನಾದಿ ಪದಾರ್ಥಗಳನ್ನು ಯೋಗಿಯ ಮುಂದೆ ತಂದಿಟ್ಟು ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತಾರೆ. ಇವರ ಪ್ರಾರ್ಥನೆಗಳನ್ನು ಅಂಗೀಕರಿಸಿದರೆ, ಯೋಗಿಯು ಮತ್ತೆ ಜನನ ಮರಣ ಪ್ರವಾಹರೂಪವಾದ ಘೋರಸಂಸಾರದಲ್ಲಿ ಬೀಳಬೇಕಾಗಿ ಬರುತ್ತದೆ; ಆದ್ದರಿಂದ ಅವರ ಪ್ರಾರ್ಥನೆಗಳನ್ನು ಅಂಗೀಕರಿಸಬಾರದು.

ಯೋಗಿಗಳು ಅವರವರ ಸ್ಥಿತಿಗಳಿಂದ ನಾಲ್ಕು ತರಗತಿಗಳವರಾಗಿರುತ್ತಾರೆ.

(೧) ಯೋಗಾಭ್ಯಾಸಿಯಾದಂಥವನು ಪ್ರವೃತ್ತಿ ಮಾತ್ರ ಜ್ಯೋತಿಷ್ಕನು.

(೨) ಋತಂಭರಾ ಪ್ರಜ್ಞಾವಂತನು.

(೩) ಭೂತೇನ್ದ್ರಿಯ ಜಯಶೀಲನು.

(೪) ಅತಿಕ್ರಾಂತ ಭಾವನೀಯನು.

ನಾಲ್ಕನೆಯ ತರಗತಿಯವನು ಮಾತ್ರ ಸಮಾಧಿ ಬಲದಿಂದ ಸಪ್ತ ಭೂಮಿಕೆಗಳ ಪ್ರಜ್ಞೆಯುಳ್ಳವನಾಗಿ ಮಧುಮತಿ ಎಂಬ ಹೆಸಿರಿರತಕ್ಕ ಭೂಮಿಕೆಯನ್ನು ಸಾಧಿತ್ತಾ ಇರುತ್ತಾನಾದ್ದರಿಂದ, ಇವನನ್ನು ಮಾತ್ರ ಆ ದೇವತೆಗಳು ಪ್ರಾರ್ಥಿಸುತ್ತಾರೆ. ಈ ಯೋಗಿಯು ಆ ಪ್ರಾರ್ಥನೆಯನ್ನು ಅಂಗೀಕರಿಸಬಾರದು.

**ಅ॥ ಸಮಾಧಿ ಸಿದ್ಧಿಗೆ ಬೇರೇ ಉಪಾಯವನ್ನು ಹೇಳುತ್ತಾರೆ.**

೫೩. ಸೂ॥ ಕ್ಷಣತತ್ಕ್ರಮ ಯೋಃ ಸ್ಸಂಯಮಾ ದ್ವಿವೇಕಜಂ ಜ್ಞಾನಮ್ ॥

ತಾ॥ ಕ್ಷಣ ಕಾಲದ ಮುಂದೆಯ ಹಿಂದೆಯ ಕ್ಷಣಗಳನ್ನು ಸಂಯಮ ಮಾಡಿದರೆ ವಿವೇಕದಿಂದ ಹುಟ್ಟಿದ ಜ್ಞಾನವುಂಟಾಗುತ್ತದೆ.

ವಿ॥ ಕಾಲದ ಅಂತ್ಯಾವಯವಾಗಿ ಮತ್ತು ವಿಭಾಗಶೂನ್ಯವಾಗಿರತಕ್ಕ ಕಾಲವು ಕ್ಷಣಕಾಲವೆನ್ನಲ್ಪಡುತ್ತೆ. ಈ ಕ್ಷಣಕ್ಕೆ ಇದು ಮುಂದಿನ ಕ್ಷಣವು, ಈ ಕ್ಷಣಕ್ಕೆ ಇದು ಹಿಂದಿನ ಕ್ಷಣವು ಎಂಬ ಕ್ಷಣಗಳಲ್ಲಿ ಸಂಯಮವನ್ನು ಮಾಡುವುದರಿಂದ ಆ ಕ್ಷಣಕಾಲಗಳು ಗೋಚರಿಸುತ್ತಾ ಇರುತ್ತವೆ. ಆಗ ಬೇರೆ ಮಹದಾದಿ ಪರಮಾಣುಗಳವರೆಗೂ ಇರತಕ್ಕ ತತ್ತ್ವಗಳು ತಿಳಿಯುತ್ತವೆ. ಹೀಗೆ ತಿಳಿಯುವುದೇ ವಿವೇಕ ಜ್ಞಾನವು.

**ಅ॥ ಯಥಾರ್ಥ ಜ್ಞಾನಸಿದ್ಧಿಯಾಗುವುದಕ್ಕೆ ಉಪಾಯವನ್ನು ಹೇಳುತ್ತಾರೆ.**

೫೪. ಸೂ॥ ಜಾತಿ ಲಕ್ಷಣ ದೇಶೈ ರನ್ಯಥಾನವ ಚ್ಛೇದಾತ್ತುಲ್ಯ ಯೋಃ ಸ್ತತಃ ಪ್ರತಿ ಪತ್ತಿಃ ॥

ತಾ॥ ಪ್ರಾಣಿಗಳ ಜಾತಿಗಳಲ್ಲಿಯೂ, ಅವುಗಳ ಆಕಾರಾದಿ ರೂಪ ವಿಶೇಷಗಳಲ್ಲಿಯೂ, ಅವುಗಳ ಸ್ಥಾನವಿಶೇಷಗಳಲ್ಲಿಯೂ, ಪರಸ್ಪರಭೇದವು ತಿಳಿಯದೆಯಿರತಕ್ಕ ಸಮಾನ ವಸ್ತುಗಳಲ್ಲಿ ಸಂಯಮವನ್ನು ಮಾಡುವುದರಿಂದ ಅವು ಬೇರೆಬೇರೆಯೆಂಬ ನಿಶ್ಚಯಜ್ಞಾನವು ಹುಟ್ಟುತ್ತದೆ.

ವಿ॥ ಜಾತಿಯಿಂದಲೂ, ಆಕಾರದಿಂದಲೂ, ಸ್ಥಾನದಿಂದಲೂ, ಕೂಡ ಪರಸ್ಪರ ಭೇದವಿರುವಂಥ ಸಮಾನವಸ್ತುಗಳಲ್ಲಿ ಸಂಯಮವನ್ನು ಮಾಡುವುದರಿಂದ, ಅವುಗಳು ಬೇರೆಬೇರೆಯೆಂಬ ಜ್ಞಾನವು ಹುಟ್ಟುತ್ತದೆ. ಅಂದರೆ, ವಸ್ತುಗಳಲ್ಲಿ ಪರಸ್ಪರ ಭೇದವನ್ನು ತಿಳಿಯುವುದಕ್ಕೆ ಜಾತಿ, ಲಕ್ಷಣ, ಪ್ರದೇಶಗಳೆಂಬಿವು ಕಾರಣಗಳಾಗಿವೆ.

ಹೇಗೆಂದರೆ—ಇದು ಹಸು, ಇದು ಎಮ್ಮೆ, ಎಂಬೆರಡು ವಸ್ತುಗಳ ಭೇದವು ತಿಳಿಯುವುದಕ್ಕೆ ಜಾತಿಕಾರಣವಾಗಿದೆ. ಮತ್ತು ಇದು ಕಪ್ಪಗಿರುವ ಹಸು, ಇದು ಬಿಳಿಯ ಹಸು, ಎಂಬೆರಡು ವಸ್ತುಗಳಲ್ಲಿ ಭೇದವನ್ನು ತಿಳಿಯಲು ಜಾತಿಕಾರಣವಲ್ಲದೆ ಕಪ್ಪು ಬಿಳುಪು ಎಂಬ ಲಕ್ಷಣಗಳು ಕಾರಣ

ವಾಗಿವೆ. ಸಮವಾಗಿರುವ ಎರಡು ಆಮಲಕ ಕಾಯಿಗಳ ಭೇದವು ತಿಳಿಯುವುದಕ್ಕೆ ಜಾತಿ ಲಕ್ಷಣಗಳು ಕೂಡ ಕಾರಣವಾಗಿವೆ. ಆ ಎರಡರಲ್ಲಿಯೂ, ಇದಕ್ಕೆ ಅದು ಮುಂದೆಯಾಗಿಯೂ, ಅದಕ್ಕೆ ಇದು ಮುಂದೆಯಾಗಿಯೂ, ಇದೆಯೆಂದು ಅವುಗಳ ಭೇದವನ್ನು ತಿಳಿಯುವುವಕ್ಕೆ ದೇಶವು ಕಾರಣವಾಗಿದೆ. ಯಾವುದರಿಂದಾಗಲಿ ಜಾತಿ ಲಕ್ಷಣ ದೇಶ ಈ ಮೂರರಿಂದ ಭೇದವು ತಿಳಿಯುವುದಕ್ಕೆ ಅವಶ್ಯಕವಾಗಿರುವ ಒಂದೇ ಜಾತಿ, ಒಂದೇ ಲಕ್ಷಣ, ಒಂದೇ ದೇಶದಲ್ಲಿರತಕ್ಕ ಪೃಥ್ವೀ ಪರಮಾಣುಗಳ ಭೇದವು, ಆದ ಇವುಗಳನ್ನು ತಿಳಿಯುವುದಕ್ಕೆ ಅವುಗಳ ಸಂಯಮ ಮಾಡುವವನಿಗೆ, ಅವುಗಳ ಭೇದವು ಯಾವಾಗ ತಿಳಿಯಬರುವುದೋ, ಆ ಕ್ಷಣದಲ್ಲಿಯೇ ಅತಿ ಸೂಕ್ಷ್ಮಗಳಿಂದ ಸಕಲ ವಿಷಯಗಳ ಜ್ಞಾನವು ಹುಟ್ಟುತ್ತದೆ. ಏತಕ್ಕೆಂದರೆ, ತನಗೆ ಕಾಣದಿರುವ ಸ್ಥಳದಲ್ಲಿರತಕ್ಕ ಒಂದೇ ಶ್ರುತಿಮಾಡಿರುವ ನಾಲ್ಕು ವೀಣೆಗಳಿಂದ ಒಂದೇ ಸ್ವರವನ್ನು ಒಂದೇ ಕಾಲದಲ್ಲಿ ಬಾರಿಸಿದರೆ ಆ ಸ್ವರವು ಒಂದಾಗಿ ಕೇಳಿಸಿದರೂ, ಆ ಒಂದೇ ಸ್ವರದಲ್ಲಿರುವ ಭೇದಗಳು ಮಾತ್ರ ಕಾಣುತ್ತಾ ಇರುತ್ತದೆ.

**ಅ|| ತಾರಕ ಶಬ್ದಾರ್ಥವನ್ನು ಹೇಳುತ್ತಾರೆ.**

೫೫. ಸೂ|| ತಾರಕಂ ಸರ್ವವಿಷಯಂ ಸರ್ವಥಾ ವಿಷಯಮ ಕ್ರಮಂ ಚೇತಿ ವಿವೇಕಜಂ ಜ್ಞಾನಮ್ ||

ತಾ|| ವಿವೇಕದಿಂದ ಹುಟ್ಟಿದ ಜ್ಞಾನಕ್ಕೆ ತಾರಕವೆಂದು ಹೆಸರು. ಈ ತಾರಕ ಜ್ಞಾನವು ಮಹದಾದಿ ಸಮಸ್ತ ತತ್ತ್ವಗಳು ವಿಷಯವಾಗಿರುವುದು. ಮತ್ತು ಕ್ರಮ ರಹಿತವಾದದ್ದು. ಇದು ವಿವೇಕದಿಂದ ಹುಟ್ಟಿದ ಜ್ಞಾನವು.

ವಿ|| ಮುಂದೆ ಹೇಳಿದ ವಿವೇಕ ಜನ್ಯ ಜ್ಞಾನವು ತಾರಕವು. (ಅಂದರೆ ಘೋರ ಸಂಸಾರದಿಂದ ತಪ್ಪಿಸುವುದು ಇಲ್ಲವೆ ಯಥಾರ್ಥವಾದದ್ದೆಂದು ಹೇಳಲ್ಪಡುವುದು.) ತಾರಕ ಜ್ಞಾನದಿಂದ ಪರಮಾಣುವು ಮೊದಲು ಮೂಲಪ್ರಕೃತಿಯ ವರೆಗೂ ಇರುವ ಸ್ಥೂಲ ಸೂಕ್ಷ್ಮಾದಿ ನಾನಾವಸ್ಥಾ ಭೇದಗಳಲ್ಲಿರುವ ಸರ್ವವನ್ನೂ ಸರ್ವತೋಮುಖವಾಗಿ ಏಕಕಾಲದಲ್ಲಿಯೇ ಗೋಚರಿಸುತ್ತವೆ.

**ಅ|| ತಾರಕಜ್ಞಾನ ಪ್ರಯೋಜನವಾದ ಕೈವಲ್ಯವನ್ನು ನಿರೂಪಿಸುತ್ತಾರೆ.**

೫೬. ಸೂ|| ಸತ್ತ್ವಪುರುಷಯೋಃ ಶುದ್ಧಿಸಾಮ್ಯೇ ಕೈವಲ್ಯಮ್ ||

ತಾ|| ಚಿತ್ತದ ಸತ್ತ್ವಕ್ಕೂ, ಪುರುಷನಿಗೂ, ನಿರ್ಮಲತ್ವವು ಏಕ ಕಾಲದಲ್ಲಿ ಹುಟ್ಟುವಿಕೆಯೇ ಕೈವಲ್ಯ.

ವಿ|| ಚಿತ್ತದಲ್ಲಿ ಸತ್ತ್ವಕ್ಕೆ ಕರ್ತೃತ್ವಾದ್ಯಭಿಮಾನಗಳಿರತಕ್ಕ ಗುಣವು ಲಯವಾಗಿ, ತನ್ನ ಸ್ವಕಾರಣವಾದ ಸನ್ಮಾತ್ರ ಪುರುಷನಲ್ಲಿ ಪ್ರವೇಶಿಸುವಿಕೆಯು, ಪುರುಷ ನಲ್ಲಿ ಆರೋಪಿತವಾಗಿರುವ ಭೋಗವು ನಿವರ್ತಿಸುವಿಕೆಯು, ಹೀಗೆ ಒಂದೇ ಸ್ಥಿತಿ ಹುಟ್ಟುವಿಕೆಯೇ ನಿರತಿಶಯಾನಂದ ಕೈವಲ್ಯ ಸ್ವರೂಪವಾದ ಮೋಕ್ಷ ಪದವಿಯೆನ್ನಲ್ಪಡುತ್ತೆ.

ಪಾತಂಜಲಿ ಯೋಗಸೂತ್ರಗಳಲ್ಲಿ
ವಿಭೂತಿಪಾದವು
ಸಮಾಪ್ತ.



# ಕೈವಲ್ಯಪಾದ

ಶ್ಲೋ॥ ಯತ್ಪದಾಂಘ್ರಿ ದ್ವಯಿೀ ಸೇವ ದತ್ತೇ ಸಿದ್ಧಿಂ
ಚ ಸರ್ವದಾ ।
ಕೈವಲ್ಯಾನಂದ ಪದವೀಂ ನೌಮಿ ತಂ ಪಾರ್ವತೀ
ಪತಿಮ್ ॥

**ಅ॥ ಪೂರ್ವೋಕ್ತ ಪಾದಗಳಲ್ಲಿ ಜೀವನಿಗೆ ಕೈವಲ್ಯ ಸ್ವರೂಪವನ್ನು ಬೋಧಕವಾಗುವುದಕ್ಕೆ ತಕ್ಕ ಸಾಧನೆಗಳನ್ನು ನಿರೂಪಿಸಿ, ಈ ಕೈವಲ್ಯ ಪಾದದಲ್ಲಿ ಸಮಸ್ತ ಸಿದ್ಧಿಗಳಿಗೂ ಸಮಾಧಿಯೇ ಕಾರಣವೆಂದೂ; ಈ ಸಿದ್ಧಿಗಳು ಪೂರ್ವಜನ್ಮಗಳದ್ದಾದರೂ, ಅಭಿವ್ಯಕ್ತವಾಗುವುದೆಂದೂ; ಸಮಸ್ತ ಸಮಾಧಿಗಳ ಫಲವು ಕೈವಲ್ಯಮಹಾಪದವಿಯೆಂದೂ ಬೋಧಿಸುತ್ತಾರೆ.**

೧. ಸೂ॥ ಜನ್ಮೌಷಧಿ ಮನ್ತ್ರ ತಪ ಸ್ಸಮಾಧಿಜಾ ಸಿದ್ಧಯಃ ॥

ತಾ॥ ಜನ್ಮಗಳು, ಮೂಲಿಕೆಗಳು, ಮಂತ್ರಗಳು, ತಪಸ್ಸು, ಸಮಾಧಿ, ಇವುಗಳಿಂದ ಹುಟ್ಟುವಂಥ ಸಮಾಧಿ ಸಿದ್ಧಿಗಳು ಐದು ವಿಧಗಳಾಗಿವೆ.

ವಿ॥ ಸಮಾಧಿ ಸಿದ್ಧಿಗಳು ನಾನಾವಿಧಗಳಾದ ಜನ್ಮಗಳಿಂದಲೂ, ಮೂಲಿಕೆಗಳು ಸೇವಿಸುವುದರಿಂದಲೂ, ಮಂತ್ರಗಳನ್ನು ಜಪಿಸುವುದರಿಂದಲೂ, ತಪಸ್ಸು ಮಾಡುವುದರಿಂದಲೂ, ಸಮಾಧಿಗಳನ್ನು ಅಭ್ಯಾಸಮಾಡುವುದರಿಂದಲೂ, ಆಗುತ್ತವೆ. ಹೇಗೆಂದರೆ:—

(೧) ಜನ್ಮಾದಿಗಳನ್ನು ನಿಮಿತ್ತಮಾಡಿಕೊಂಡು ಆಕಾಶದಲ್ಲಿ ಸಂಚರಿಸುವಿಕೆ, ನೀರಿನಲ್ಲಿರುವಿಕೆ, ಜೀವದ ಚರ್ಯಗಳಿಲ್ಲದೆ ದೇಹವನ್ನಿರಿಸಿಕೊಂಡಿರುವಿಕೆ, ಬಹಳಕಾಲ ಜೀವಿಸುವಿಕೆ, ಮನಸ್ಸಿಗೆ ತೋಚಿದ ಹಾಗೆ ಆಕಾರಗಳನ್ನು ಧರಿಸುವಿಕೆ, ಪರಕಾಯ ಪ್ರವೇಶ ಮಾಡುವಿಕೆ, ಇವೇ ಮೊದಲಾದುವುಗಳು ಸಮಾಧಿಯಿಂದ ಹುಟ್ಟಿದ ಸಿದ್ಧಿಗಳು.

(೨) ಪೂರ್ವ ಜನ್ಮಗಳಲ್ಲಿ ಹುಟ್ಟಿದ ಸಮಾಧಿಯ ಬಲದಿಂದ ಪಕ್ಷಿಗಳು, ಜಲ ಚರಗಳು, ಸರ್ಪಗಳು, ಪಿಶಾಚಪ್ರಾರಬ್ಧಗಳು, ಈ ವಿಧವಾದ ಒಂದೊಂದು

ಪ್ರಾಣಿಯನ್ನು ನಿಮಿತ್ತಮಾಡಿಕೊಂಡಿರುವಿಕೆ ಜನ್ಮದಿಂದ ಹುಟ್ಟಿದ ಸಿದ್ಧಿಗಳು.

(೩) ನಿದ್ರಾಹಾರಗಳಿಲ್ಲದೆ ಇರುವಿಕೆ, ಶೀತೋಷ್ಣ ವಿಷವ್ಯಾಧಿಗಳ ನಿಗ್ರಹ, ಇಂದ್ರಿಯ ಪಟುತ್ವ, ಶರೀರ ದಾರ್ಢ್ಯ, ಜರಾಮರಣಾದಿಗಳ ನಿರೋಧ, ದೂರ ಗಮನಾಗಮನಗಳು ಮೊದಲಾದ ಸಿದ್ಧಿಗಳು, ಲೇಹ್ಯ ಚೂರ್ಣ ಕಾಯಕಲ್ಪ ಸಿದ್ಧರಸಾಯನ ಘಟಿಕಾ ಪಾದುಕೆಗಳೇ ಮೊಲಾದ ಸಿದ್ಧಿಗಳು ಮೂಲಿಕೆಗಳಿಂದ ಹುಟ್ಟಿದ ಸಿದ್ಧಿಗಳು.

(೪) ಆಯಾ ಮಂತ್ರಾಧಿಷ್ಠಾನ ದೇವತೆಗಳ ಶಕ್ತ್ಯನುಗುಣವಾಗಿ ಹುಟ್ಟು ವಂಥಾದ್ದು ಮಂತ್ರಗಳಿಂದ ಹುಟ್ಟಿದ ಸಿದ್ಧಿಗಳು.

(೫) ಅವರವರ ತಪೋಬಲವನ್ನನುಸರಿಸಿ ಹುಟ್ಟುವಂಥ ಸಿದ್ಧಿಗಳು ತಪಸ್ಸಿನಿಂದ ಹುಟ್ಟಿದ ಸಿದ್ಧಿಗಳು.

(೬) ಮತ್ತು ಸಮಾಧಿಗಳಿಂದ ಹಟ್ಟುವ ಸಿದ್ಧಿಗಳ ವಿಷಯವಾಗಿ ೧-೨-೩ನೇ ಪಾದಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ.

(೭) ಈ ಸಿದ್ಧಿಗಳು ಪೂರ್ವಜನ್ಮದ ಸಮಾಧಿಯ ಬಲದಿಂದ ಹುಟ್ಟುವುದೆಂದು ನಿರೂಪಿಸಿದೆ. ಮತ್ತು ಸಮಾಧಿಯೆಂಬುದು ಸಿದ್ಧಿಗಳಿಗೆ ಮುಖ್ಯ ಕಾರಣವಾದದ್ದೆಂದು, ಜನ್ಮಾದಿಗಳು ನಿಮಿತ್ತ ಕಾರಣವೆಂದೂ, ಹೇಳಲ್ಪಟ್ಟಿದ್ದರಿಂದ ಸಮಾಧಿಗೆ ಅಧಿಕ ಪ್ರಾಶಸ್ತ್ಯವು ಹುಟ್ಟಿತು.

**ಅ॥ ಒಂದೇ ಜನ್ಮದಲ್ಲಿ ಸಮಾಧಿಯನ್ನು ಹೊಂದಬಹುದೆಂದು ಹೇಳುತ್ತಾರೆ.**

## ೨. ಸೂ॥ ಜಾತ್ಯನ್ತರ ಪರಿಣಾಮಃ ಪ್ರಕೃತ್ಯಾ ಪೂರ್ವಾತ್ ॥

ತಾ॥ ಒಂದೇ ಜನ್ಮದಲ್ಲಿ ಬೇರೇ ಜಾತಿಯಾಗಿ ಪರಿಣಮಿಸುವುದೆಂಬುದು ಪ್ರಕೃತಿ ಪರಿಣಾಮ ಸಮಾಪ್ತಿಯಿಂದ ಹುಟ್ಟಿದುದು.

ವಿ॥ ಪಕೃತಿ ಯೆಂದರೆ, ಪ್ರಧಾನವು ಮೊದಲುಗೊಂಡು ಪೃಥಿವಿಯವರೆಗೂ ಇರತಕ್ಕ ಪದಾರ್ಥಗಳು.

ಈ ಪದಾರ್ಥಗಳ ಅಂಶವು ಸಮಸ್ತ ದೇಹಗಳಲ್ಲಿಯೂ ಇರುತ್ತಾದ್ದರಿಂದ, ಪ್ರತಿಕ್ಷಣದಲ್ಲಿಯೂ, ಪರಿಣಮಿಸುತ್ತಾ ಇರುತ್ತದೆ.

ಇದರಿಂದ ಒಂದೇ ಜನ್ಮದಲ್ಲಿ ಪೂರ್ವಜಾತಿ ಪರಿಣಾಮವು ಪೂರ್ತಿಯಾಗಿ ಬೇರೆ ಜಾತಿಯ ಪರಿಣಾಮವು ಆಗುತ್ತದೆ.

ದೃಷ್ಟಾಂತವು—ನಂದೀಶ್ವರನಿಗೆ ಆ ಜನ್ಮದಲ್ಲಿಯೇ ಪೂರ್ವ ಜಾತಿಯ ಪರಿಣಾಮವು ಪೂರ್ತಿಯಾಗಿ, ಬೇರೇ ಜಾತಿ ಪರಿಣಾಮವಾಗಿರುವುದರಿಂದಲೂ ; ಜನ್ಮಾಂತರಾರಭ್ಯಸ್ತವಾದ ಸಮಾಧಿ ಫಲವು ಅಭಿವ್ಯಕ್ತವಾಗಿ, ಆ ಮೊದಲನೆಯ ಜಾತಿ ಅನರ್ಥವಾಗಿ ಹೋಗಿರುವುದರಿಂದಲೂ; ಆ ಯರಡನೇ ಜಾತಿಯ ದೇಹದಲ್ಲಿ ಫಲವು ಅಭಿವ್ಯಕ್ತವಾಗಿದೆ. ಹೇಗೆಂದರೆ, ರೇಷ್ಮೆಯ ಹುಳುವು ಮೊದಲು ಕಂಬಳಿ ಹುಳುವಾಗಿದ್ದು ಆ ಪರಿಣಾಮವು ತೀರಿದಮೇಲೆ ಆ ದೇಹದಲ್ಲಿಯೇ ಸಂಜೀವಿ ಹುಳುವಿನ ಹಾಗೆ ಪರಿಣಾಮವಾಗುತ್ತದೆ. ಆದುದರಿಂದ, ಪ್ರಕೃತಿಯ ಪರಿಣಾಮವು ಪೂರ್ತಿಯಾಗುವುದೇ ಬೇರೇ ಜಾತಿಯ ಜನ್ಮಕ್ಕೆ ಕಾರಣವೆಂದು ತಿಳಿಯಬೇಕು.

**ಅ|| ಸಮಸ್ತ ಜನ್ಮಗಳಿಗೂ ಪ್ರಕೃತಿಯೇ ಕಾರಣವೆಂದು ಹೇಳುತ್ತಾರೆ.**

೩. ಸೂ|| ನಿಮಿತ್ತ ಮಪ್ರಯೋಜಕಂ ಪ್ರಕೃತೀನಾಂ ವರಣ ಭೇದಸ್ತು ತತಃ ಕ್ಷೇತ್ರೀಕವತ್ ||

ತಾ|| ಕರ್ಮವು ಪ್ರಕೃತಿ ಭಾಗಗಳ ಕಾರ್ಯವಾದ ಜಾತ್ಯಂತರ ಪರಿಣಾಮಕ್ಕೆ ಕಾರಣವಾದದ್ದಲ್ಲ. ಆ ಕರ್ಮದಿಂದ, ವ್ಯವಸಾಯವನ್ನು ಮಾಡುವವನು ಅಡ್ಡವಾಗಿರುವುದನ್ನು ತೆಗೆದು ಬಿಸಾಡಿದಹಾಗೆ ಆ ಪ್ರಕೃತಿಯ ಆವರಣವು ನಿವೃತ್ತಿಯಾಗುತ್ತದೆ.

ವಿ|| ಪ್ರಕೃತಿಯಿಂದ ಹುಟ್ಟುವಂಥ ಜಾತ್ಯಂತರ ಪರಿಣಾಮಕ್ಕೆ ಕರ್ಮವು ಕಾರಣವಾಗಲಾರದು. ಏತಕ್ಕೆಂದರೆ; ಕಾರಣದಿಂದ ಕಾರ್ಯವಾಗುವುದೇ ಹೊರತು, ಕಾರ್ಯದಿಂದ ಕಾರಣವಾಗಲಾರದು. ಆದುದರಿಂದ ಈ ಪುಣ್ಯಪಾಪ ರೂಪವಾದ ಕರ್ಮವು ಪ್ರಕೃತಿಯ ಕಾರ್ಯವಾಗಿರುವುದರಿಂದ, ಇದು ತನಗೆ ಕಾರಣವಾದ ಪ್ರಕೃತಿಯ ಸ್ವಭಾವರೂಪ ಪರಿಣಾಮವಾದ ಜನ್ಮಗಳಿಗೆ ಕಾರಣವಾಗುವುದಿಲ್ಲ. ಆದರೂ, ಪುಣ್ಯ ಫಾಪರೂಪವಾದ ಈ ಕರ್ಮವು ಪ್ರಕೃತಿಯ ಪರಿಣಾಮದಿಂದ ಹುಟ್ಟುವ ಜನ್ಮಗಳಿಗೆ ಪ್ರತಿಬಂಧಕವಾಗಲಿ, ಬಲವಂತವಾಗಲಿ ಮಾಡುವುದಾಗಿರುತ್ತದೆ. ಹೇಗೆಂದರೆ, ವ್ಯವಸಾಯ ಮಾಡುವವನು ಒಂದು ಗದ್ದೆಯಿಂದ ಮತ್ತೊಂದು ಗದ್ದೆಗೆ ನೀರು ಬಿಡುವಾಗ ಮಧ್ಯೆ ಅಡ್ಡವಾಗಿರುವ ಮಣ್ಣನ್ನು ತೆಗೆದುಹಾಕಿದಮೇಲೆ, ಆ ಗದ್ದೆಯಲ್ಲಿರುವ ನೀರು ಮತ್ತೊಂದು ಗದ್ದೆಗೆ ಕರ್ಷಕನ (ವ್ಯವಸಾಯಗಾರನ) ಪ್ರೇರಣೆಯಿಲ್ಲದೆಯೇ ಸ್ವಭಾವವಾಗಿ ಪ್ರವೇಶಿಸಿ ಚೌಕವು ಮತ್ತು ತ್ರಿಕೋಣವಾದ ಆಕಾರಗಳುಳ್ಳ ಆ ಗದ್ದೆಗಳ ಹಾಗೆ ಯಾವರೀತಿ ಪರಿಣಮಿ

ಸುತ್ತ್ಯದೋ ; ಹಾಗೆಯೇ ಪುಣ್ಯಪಾಪಗಳು ಅನುಭವಿಸಿಯಾಗಲಿ, ತಮಗೆ ವಿರೋಧವಾದ ಕರ್ಮವು ಮಾಡುವುದರಿಂದಾಗಲಿ, ಸಮಾಪ್ತಿಯಾಗಿ ಹೋಗುವುದರಿಂದ, ಪ್ರಕೃತಿಯ ಪರಿಣಾಮಕ್ಕಿರುವ ಪ್ರತಿಬಂಧಕವು ತಪ್ಪಿ ಹೋಗಿ, ತನ್ನ ಸ್ವಭಾವದ ಹಾಗೆ ಪರಿಣಮಿಸುವುದು. ಆದ್ದರಿಂದ, ಪ್ರಕೃತಿಯ ಪರಿಣಾಮದಲ್ಲಿ ಅನೇಕ ಜನ್ಮಗಳಿವೆ. ಕರ್ಮಗಳಿಂದ ಈ ಜನ್ಮಗಳಲ್ಲಿ ಯಾವದನ್ನಾಗಲಿ ಸಂಪಾದಿಸಿಕೊಳ್ಳಬಹುದು. ಇಲ್ಲವೆ ಹೋಗಲಾಡಿಸಿಕೊಳ್ಳಬಹುದು.

**ಅ॥ ತತ್ತ್ವಸಾಕ್ಷಾತ್ಕಾರವುಳ್ಳ ಯೋಗಿ ಸ್ವೇಚ್ಛಾನುಸಾರವಾಗಿ ಅನೇಕ ಶರೀರಗಳನ್ನು ಉತ್ಪತ್ತಿ ಮಾಡಿಕೊಳ್ಳುತ್ತಾನೆಂದು ಹೇಳುತ್ತಾರೆ.**

ಳ. ಸೂ॥ ನಿರ್ಮಾಣ ಚಿತ್ತಾನ್ಯಸ್ಮಿತಾಮಾತ್ರಾತ್ ॥

ತಾ॥ **ಯೋಗಿ ನಿರ್ಮಿಸಿಕೊಳ್ಳುವಂಥ ದೇಹಗಳಲ್ಲಿರುವ ಚಿತ್ತಗಳು ಹುಟ್ಟಲಿ, ಎಂದು ನೆನೆದ ಮಾತ್ರದಿಂದಲೇ ನಾನಾ ದೇಹಗಳು ಚಿತ್ತಗಳು ಹುಟ್ಟುತ್ತವೆ.**

ವಿ॥ ಕರ್ಮಶೇಷವಿಲ್ಲದ ಯೋಗಿ (ತತ್ತ್ವಸಾಕ್ಷಾತ್ಕಾರವುಳ್ಳ ಯೋಗಿ) ಕರ್ಮಫಲಗಳಾದ ಸುಖಾದಿಗಳನ್ನನುಭವಿಸುವುದಕ್ಕೆ ನೆನೆದ ಮಾತ್ರದಿಂದಲೇ, ಅಗ್ನಿಯಿಂದ ಯಾವರೀತಿ ನಿಮಿಷಮಾತ್ರದಲ್ಲಿ ಅನೇಕಗಳಾದ ಕಣಗಳು ಹುಟ್ಟುತ್ತವೆಯೋ, ಹಾಗೆಯೇ ಅನೇಕವಾದ ದೇಹಾಕಾರಗಳಾಗಿ ಪರಿಣಮಿಸುತ್ತವೆ.

**ಅ॥ ಯೋಗಿಯ ಶರೀರಗಳು ಬೇರೆಯಾದರೆ ಆತನ ಚಿತ್ತವು ಮಾತ್ರ ಏಕರೀತಿಯಾಗಿಯೇ ಇರುತ್ತದೆಂದು ಹೇಳುತ್ತಾರೆ.**

೫. ಸೂ॥ ಪ್ರವೃತ್ತಿ ಭೇದೇ ಪ್ರಯೋಜಕಂ ಚಿತ್ತಮೇಕ ಮನೇಕೇಷಾಮ್ ॥

ತಾ॥ **ಬಹು ವಿಧಗಳಾದ ಚಿತ್ತವೃತ್ತಿಗಳ ಭೇದದಲ್ಲಿ ಕೂಡ ಯೋಗಿಯ ಸ್ವಕೀಯ ಚಿತ್ತವು ಒಂದೇ ಕಾರಣವಾಗಿದೆ.**

ವಿ॥ ಆ ಅನೇಕ ಚಿತ್ತಗಳ ಪ್ರವೃತ್ತಿ ನಿವೃತ್ತಿಗಳು ಭೇದವಿರುವ ಹಾಗೆ ಕಾಣಿಸಿದರೂ, ಯೋಗಿಯ ಸ್ವಕೀಯವಾದ ಚಿತ್ತವು ಮಾತ್ರ ಒಂದೇ ಕಾರಣವಾಗಿರುತ್ತದೆ. ಹೇಗೆಂದರೆ, ಒಂದು ದೇಹದಲ್ಲಿರುವ ಚಿತ್ತವು ಇಂದ್ರಿಯಾದಿಗಳನ್ನು ತನ್ನಯಿಚ್ಛಾನುಸಾರವಾಗಿ ಹೇಗೆ ಪ್ರೇರೇಪಿಸುತ್ತದೆಯೋ ಹಾಗೆಯೆಂದು ಭಾವವು.

**ಅ॥ ಯೋಗಿಯ ಪ್ರಕೃತಿ ಜನ್ಮ ಚಿತ್ತವೇ ಶ್ರೇಷ್ಠವಾದದ್ದೆಂದು ಭೋಧಿಸುತ್ತಾರೆ.**

೬. ಸೂ॥ ತತ್ರ ಧ್ಯಾನಜ ಮನಾಶಯಮ್ ॥

ತಾ॥ ಆ ಅನೇಕ ಚಿತ್ತಗಳೆಲ್ಲಕ್ಕಿಂತಲೂ, ಈಗಿನ ಸಮಾಧಿಯಿಂದ ಹುಟ್ಟಿದ ಚಿತ್ತವು ಕರ್ಮವಾಸನಾರಹಿತವಾದದ್ದು.

ವಿ॥ ಇದುವರೆಗೂ ಹೇಳಲ್ಪಟ್ಟ ಜನ್ಮಾದಿಕಾರಣಗಳಿಂದ ಹುಟ್ಟಿದ ಐದು ವಿಧಗಳಾದ ಚಿತ್ತಗಳಿಗಿಂತಲೂ, ಈಗಿನ ಸಮಾಧಿಯಿಂದ ಅನೇಕ ಚಿತ್ತಗಳಾಗಿ ಪರಿಣಮಿಸುವ ಶಕ್ತಿಯುಳ್ಳ ಚಿತ್ತವು ಕರ್ಮವಾಸನಾರಹಿತವಾಗಿರುತ್ತದೆ.

**ಅ॥ ಇತರರು ಆಚರಿಸುವ ಕರ್ಮಕ್ಕಿಂತಲೂ, ಯೋಗಿಗಳ ಕರ್ಮವು ಉತ್ತಮವಾದದ್ದೆಂದು ಹೇಳುತ್ತಾರೆ.**

೭. ಸೂ॥ ಕರ್ಮಾ ಶುಕ್ಲ ಕೃಷ್ಣಂ ಯೋಗಿನ ಸ್ತ್ರಿವಿಧ ಮಿತರೇ ಷಾಮ್ ॥

ತಾ॥ ಯೋಗಿಗಳಿಗಿಂತಲೂ ಇತರರಾದವರ ಕರ್ಮಗಳು; ಶುಕ್ಲವಾದದ್ದು, ಕೃಷ್ಣವಾದದ್ದು, ಮಿಶ್ರವಾದದ್ದೆಂದು ಮೂರು ವಿಧಗಳಾಗಿವೆ.

ವಿ॥ ಯೋಗಿಗಳಿಗಿಂತಲೂ, ಇತರರ ಕರ್ಮಗಳು ಪುಣ್ಯಪಾಪಮಿಶ್ರರೂಪವಾದ ಸುಖದುಃಖ ಮಿಶ್ರ ಫಲಗಳ ಕೊಡತಕ್ಕಂಥವುಗಳಾಗಿರುತ್ತವೆ. ಶುಭ ಫಲಗಳು ಕೊಡತಕ್ಕಂಥ ಯಾಗಾದಿ ಸತ್ಕರ್ಮಗಳು ಶುಕ್ಲಕರ್ಮವೆಂದೂ, ಅಶುಭ ಫಲಗಳು ಕೊಡತಕ್ಕ ಬ್ರಹ್ಮಹತ್ಯಾದಿ ದುಷ್ಕರ್ಮಗಳು ಕೃಷ್ಣ ಕರ್ಮಗಳೆಂದೂ, ಮಿಶ್ರಫಲಗಳನ್ನು ಕೊಡತಕ್ಕ ವಾಪೀ ಕೂಪ ತಟಾಕಾರಾಮ ನಿರ್ಮಾಣಾದಿ ಕರ್ಮಗಳು ಸುಖದುಃಖ ಫಲಗಳನ್ನು ಕೊಡುವಂಥಾವುಗಳಿಗೆ ಮಿಶ್ರ ಕರ್ಮಗಳೆಂದೂ, ಕರ್ಮವು ಮೂರು ವಿಧಗಳಿವೆ. ಕರ್ಮವಾಸನಾರಹಿತವಾದ ಯೋಗಿಗಳು ಯಾವ ಕರ್ಮವನ್ನು ಮಾಡಿದರೂ, ಅದು ಸಂಚಿತವಾಗಿನಿಲ್ಲದೆ ಜ್ಞಾನಾಗ್ನಿಯಿಂದ ದಹಿಸಲ್ಪಡುತ್ತದೆ. ಆದುದರಿಂದ ಯೋಗಿಯ ಕರ್ಮವು ವಿಲಕ್ಷಣವಾಗಿದೆ.

**ಅ॥ ಪುಣ್ಯಪಾಪ ಮಿಶ್ರ ಕರ್ಮಗಳ ಸಂಸ್ಕಾರ ಫಲಗಳನ್ನು ನಿರೂಪಿಸುತ್ತಾರೆ.**

೮. ಸೂ॥ ತತ ಸ್ತದ್ವಿಪಾಕಾ ನುಗುಣಾ ನಾಮೇವಾ ಭಿವ್ಯಕ್ತಿ ರ್ವಾಸನಾನಾಮ್ ॥

ತಾ|| ಆ ಕರ್ಮಗಳಿಂದ ಆಯಾ ಜಾತಿ ದೇಹಗಳ ಪರಿಪಾಕಗಳಿಗೆ ಅನುಕೂಲಿಸುವಂಥಾಗಿರುವ ಸಂಸ್ಕಾರ ಫಲಗಳು ಆವಿರ್ಭಾವ ವಾಗುತ್ತವೆ.

ವಿ|| ಸಂಸ್ಕಾರ ಫಲಗಳು ಸ್ಮೃತಿಮಾತ್ರ ಸಂಸ್ಕಾರ ಫಲಗಳೆಂದೂ, ಜಾತ್ಯಾಯುರ್ಭೋಗ ಫಲಗಳೆಂದೂ, ಎರಡು ವಿಧ.

**ಸ್ಮೃತಿಮಾತ್ರ ಸಂಸ್ಕಾರ ಫಲಗಳೆಂದರೆ**—ಮಾಡುವುದರಿಂದಲೂ, ಅನುಭವಿಸುವುದರಿಂದಲೂ, ತಿಳಿದುಕೊಳ್ಳುವುದರಿಂದಲೂ, ಹುಟ್ಟುವ ಸಂಸ್ಕಾರವು ಚಿತ್ತದಲಿದ್ದು ತಕ್ಕ ಕಾರಣಗಳ ಮೂಲಕವಾಗಿ ಜ್ಞಾಪಕಕ್ಕೆ ಬರತಕ್ಕಂಥಾವುಗಳಾಗಿವೆ. ಹೇಗೆಂದರೆ, ಮೊದಲು ದೇವತಾ ದೇಹವು ಬಂದಾಗ ಹುಟ್ಟುವ ಸಂಸ್ಕಾರಗಳೆಲ್ಲವೂ ಚಿತ್ತದಲ್ಲಿದ್ದು, ಮರಳಿ ದೇವತಾ ದೇಹವು ಬಂದಾಗ ತಪ್ಪದೆ ಅಭಿವ್ಯಕ್ತವಾಗುತ್ತವೆ. ಆ ದೇವತಾದೇಹಗಳು ಯೆರಡರ ಮಧ್ಯೆ ಹುಟ್ಟಿದ ಇತರ ದೇಹಗಳಲ್ಲಿ ಅಭಿವ್ಯಕ್ತವಾಗುವುದಿಲ್ಲ. ಈ ಪ್ರಕಾರವಾಗಿ, ಮೊದಲು ಮಾನವ ದೇಹದಲ್ಲಿ ಹುಟ್ಟಿದ ಸಂಸ್ಕಾರಗಳು ಮರಳಿ ಮನುಷ್ಯ ದೇಹವು ಹುಟ್ಟುವಾಗ ಅಭಿವ್ಯಕ್ತವಾಗುತ್ತದೆ. ಆ ಮನುಷ್ಯ ದೇಹಗಳೆರಡರಮಧ್ಯೆ ಹುಟ್ಟಿದ ಯಿತರ ಗಜಾಶ್ವ ಶ್ವಾನ ಸೂಕರಾದಿ ದೇಹಗಳಲ್ಲಿ ಆ ಮನುಷ್ಯ ದೇಹದಲ್ಲಿ ಹುಟ್ಟಿದ ಸಂಸ್ಕಾರಗಳು ಅಭಿವ್ಯಕ್ತ ವಾಗುವುದಿಲ್ಲ. ಹೀಗೆ ಮುಂದೆ ಯಾವ ಜಾತಿ ದೇಹವು ಇವುಗಳಲ್ಲಿ ಹುಟ್ಟಿದರೂ, ಆ ವಾಸನೆ ಮತ್ತೆ ಅಂಥ ದೇಹವು ಬಂದಾಗ ಮಾತ್ರವೇ ಅಭಿವ್ಯಕ್ತವಾಗುತ್ತದೆ. ಇತರ ದೇಹಗಳು ಹುಟ್ಟಿದಾಗ ಆ ಸಂಸ್ಕಾರಗಳು ಅಭಿವ್ಯಕ್ತವಾಗದೆ ಚಿತ್ತದಲ್ಲಿ ಆಚ್ಛಾದಿತವಾಗಿ ನಿಂತಿರುತ್ತದೆಯೇ ಹೊರತು ಅಭಿವ್ಯಕ್ತವಾಗುವುದಿಲ್ಲ (ಜಾತ್ಯಾಯು ಭೋಗಗಳನ್ನು ಕುರಿತು ೨-ನೇ ಪಾದದ ೧೩-ನೇ ಸೂತ್ರವನ್ನು ನೋಡಿರಿ.)

**ಅ|| ಪ್ರಾಣಿಗಳ ಜನ್ಮಾದಿವಾಸನೆಗಳು ಚಿತ್ತದಲ್ಲಿದ್ದು ಸಮಾನ ದೇಹಗಳಲ್ಲಿಯೇ ಅಭಿವ್ಯಕ್ತವಾಗುವುದೆಂಬುದನ್ನು ದೃಢಪಡಿಸುತ್ತಾರೆ.**

೯. ಸೂ|| ಜಾತಿ ದೇಶ ಕಾಲ ವ್ಯವಹಿತಾನಾ ಮಪ್ಯಾನನ್ತರ್ಯಂ
ಸ್ಮೃತಿ ಸಂಸ್ಕಾರಯೋ ರೇಕರೂಪತ್ವಾತ್ ||

ತಾ|| ಜ್ಞಾಪಕವು, ವಾಸನೆ, ಇವೆರಡೂ ಒಂದೇರಿತಿಯಾಗಿರುವುದರಿಂದ ಮನುಷ್ಯತ್ವ ಪಶುತ್ವಾದಿ ಜಾತಿಗಳು, ಕಾಶೀ ರಾಮೇಶ್ವರಾದಿ ದೇಶಗಳು, ಜಯವಿಜಯಾದಿ ಸಂವತ್ಸರ ಕಾಲಗಳು, ಇವುಗಳಿಂದ

ಒಂದಕ್ಕೊಂದು ದೂರದೂರವಾಗಿದ್ದರೂ, ಆ ಸ್ಮೃತಿಸಂಸ್ಕಾರಗಳು ಒಂದರಿಂದ ಮತ್ತೊಂದು ಕ್ರಮವಾಗಿರತಕ್ಕದ್ದಾಗಿರುತ್ತವೆ.

೨॥ ಜಾತಿ, ದೇಶ, ಕಾಲಗಳಿಂದ ಒಂದು ಜನ್ಮಕ್ಕೆ ಮತ್ತೊಂದು ಜನ್ಮವು ದೂರದೂರವಾಗಿದ್ದರೂ, ಅಂದರೆ ಮನುಷ್ಯ ಜನ್ಮದಿಂದ ಮರಳಿ ಮನುಷ್ಯ ಜನ್ಮಬರುವುದಕ್ಕೆ ವಿಲಂಬನವಾದರೂ, ಆ ಮೊದಲಿನ ದೇಹದಲ್ಲಿ ಈ ಎರಡನೇಯ ದೇಹವು ಕ್ರಮವಾಗಿ ಅತಿ ಸಮೀಪದಲ್ಲಿರುವುದೆಂದು ಹೇಳಬೇಕಾಗಿಥೆ. ಆದ್ದರಿಂದ, ಆ ಮೊದಲಿನ ದೇಹದ ಸ್ಮೃತಿಸಂಸ್ಕಾರಗಳು ಈ ಯೆರಡನೇಯ ದೇಹದಲ್ಲಿ ಅಭಿವ್ಯಕ್ತವಾಗುವುವೇ ಹೊರತು, ಈ ಯೆರಡನೇಯ ದೇಹವು ಬರುವುದಕ್ಕೆ ಅತಿಸಮೀಪದಲ್ಲಿ ಬೇರೇ ದೇಹದ ಸ್ಮೃತಿ ಸಂಸ್ಕಾರಗಳು ಹುಟ್ಟುವುದಿಲ್ಲ.

ಅಂದರೆ, ಸಮಾನ ಜಾತಿ ದೇಹದ ಸ್ಮೃತಿ ಸಂಸ್ಕಾರಗಳ ಐಕ್ಯಮತ್ಯವು ಹುಟ್ಟುವುದೇ ಹೊರತು, ಭಿನ್ನ ಜಾತಿ ದೇಹಗಳ ಸ್ಮೃತಿ ಸಂಸ್ಕಾರಗಳಿಗೆ ಕಾರ್ಯಕಾರಣ ಭಾವವು ಸಂಬಂಧಿಸುವುದಿಲ್ಲ.

ಹೇಗೆಂದರೆ, ಪುಣ್ಯದಿಂದ ಮೊದಲು ಒಬ್ಬನಿಗೆ ದೇವತಾ ದೇಹವು ಹುಟ್ಟಿತ್ತು. ಆ ಪುಣ್ಯವು ಮುಗಿಯುವಷ್ಟು ಅವನ ಸಂಚಿತ ಕರ್ಮಾನುಗುಣವಾಗಿ ಬೇರೇಬೇರೆಯಾದ ಪಶು ಪಕ್ಷಿ ಕ್ರಿಮಿ ಕೀಟಕಾದ್ಯನೇಕ ದೇಹಗಳು ಬಂದುವು. ಆ ಜನ್ಮಗಳು ತೀರಿದಮೇಲೆ ಪುಣ್ಯ ಫಲವಾದ ದೇವತಾ ದೇಹವು ಮರಳಿ ಬಂತು. ಎರಡನೆಯ ದೇಹವು ಬಂದಾಗ ಆ ಮೊದಲಿನ ದೇವತಾ ದೇಹದಲ್ಲಿ ಸಂಪಾದಿಸಿದ ಸ್ಮೃತಿ ಸಂಸ್ಕಾರಗಳು ಅಭಿವ್ಯಕ್ತವಾಗುವುದೇ ಹೊರತು, ಈ ಯೆರಡು ದೇವತಾ ದೇಹಗಳ ಮಧ್ಯೆ ಹುಟ್ಟಿ ತೀರಿಹೋದ ಪಶುಪಕ್ಷ್ಯಾದಿ ದೇಹಗಳಲ್ಲಿ ಅವು ಅಭಿವ್ಯಕ್ತವಾಗಲಾರದು. ಈ ಪಶುಪಕ್ಷ್ಯಾದಿ ದೇಹಗಳು ಹುಟ್ಟುವಾಗ ಆ ದೇವತಾ ದೇಹದ ಸ್ಮೃತಿ ಸಂಸ್ಕಾರಗಳು ಅಭಿವ್ಯಕ್ತವಾಗದೆ ಚಿತ್ತದಲ್ಲಿ ಬೀಜರೂಪವಾಗಿ ನಿಂತಿರುತ್ತವೆ. ಆ ದೇವತಾ ಜನ್ಮಕ್ಕೆ ಈ ಎರಡನೆಯ ದೇವತಾ ಜನ್ಮವು ಸಮಾನಜಾತಿಯಾದ ಕಾರಣವನ್ನು ಹಿಡಿದು ಅತಿ ಸಮೀಪವಾದದ್ದೆಂದೆಣಿಸಿಕೊಳ್ಳುತ್ತದೆ. ಹೀಗೆ ಸಮಾನಜಾತಿ ದೇಹಗಳು ಹುಟ್ಟಿದಾಗ ಮಾತ್ರವೇ ಆಯಾ ದೇಹಗಳ ಸ್ಮೃತಿ ಸಂಸ್ಕಾರಗಳು ಹುಟ್ಟುತ್ತವೆ.

**ಅ॥ ಸ್ಮೃತಿ ಸಂಸ್ಕಾರಗಳು ಸಮಾನ ದೇಹಗಳಲ್ಲಿಯೇ ಅಭಿವ್ಯಕ್ತವಾಗುವುದೆಂದು ಹೇಳಿ, ಈಗ ಆ ಸ್ಮೃತಿ ಸಂಸ್ಕಾರಗಳು ಅನಾದಿಯೆಂದು ನಿರೂಪಿಸುತ್ತಾರೆ.**

೧೦. ಸೂ॥ ತಾಸಾ ಮನಾದಿತ್ವ ಮಾಶಿಷೋ ನಿತ್ಯತ್ವಾತ್ ॥

ತಾ॥ ಸದಾ ಸುಖ ಸಾಧನಗಳೆಲ್ಲ ನನಗೆ ಯಾಗಲಿ, ಯಾವಾಗಲೂ ತಪ್ಪಿಹೋಗಕೂಡದು, ಎಂಬುದು ಚಿತ್ತದಲ್ಲಿ ಮಹಾ ಮೋಹರೂಪವಾದ ಸಂಕಲ್ಪಕ್ಕೆ ಆದಿಯಿಲ್ಲವಾದುದರಿಂದ ಆ ಸ್ಮೃತಿ ಸಂಸ್ಕಾರಗಳಿಗೂ ಆದಿಯಿಲ್ಲ. ಅಂದರೆ ಹೊಸದಾಗಿ ಹುಟ್ಟುವುದಿಲ್ಲ.

ವಿ॥ ಸುಖಸಾಧನೆಗಳೆಲ್ಲ ನನಗೆ ಉಂಟಾಗಲಿ, ಅದು ನನ್ನನ್ನು ಬಿಟ್ಟು ಹೋಗಕೂಡದೆಂಬ ಮಹಾ ಮೋಹರೂಪವಾದ ಅವಿದ್ಯಾ ಸಂಕಲ್ಪವು ಅನಾದಿಯಾಗಿರುವುದರಿಂದ, ಮೊದಲಿನ ಜನ್ಮವೇ ಕಾರಣವೆಂದು ಹೇಳುವುದಕ್ಕೆ ಆಗಲಾರದು. ಹೇಗೆಂದರೆ, ಶಿಶುವು ಹುಟ್ಟುವಾಗಲೇ ಕಂಪನ, ದುಃಖ, ಮರಣಭೀತಿ, ಸ್ತನ್ಯಪಾನವು, ಮಲಮೂತ್ರ ವಿಸರ್ಜನಾದಿಗಳು, ಇವೇ ಮೊದಲಾದುವುಗಳ ಸ್ಮೃತಿ ಸಂಸ್ಕಾರಗಳು ಕ್ಲೃಪ್ತವಾಗಿ ಹುಟ್ಟುತ್ತವೆ. ಇವು ಅನಾದಿಯಾಗಿಲ್ಲದಿದ್ದರೆ, ಆ ಶಿಶುವು ಅದೇ ಜನ್ಮದಲ್ಲಿಯೇ ಮರಣಾದಿಗಳನ್ನು ಮೊದಲು ಒಂದುಸಾರಿ ಅನುಭವಿಸಿದ್ದು ಮರಳಿ ಜ್ಞಾಪಕಕ್ಕೆ ತೆಗೆದು ಕೊಳ್ಳಬೇಕಾಗಿ ಬರುತ್ತದೆ; ಹಾಗಿಲ್ಲವಾದ್ದರಿಂದ, ಆ ಸ್ಮೃತಿ ಸಂಸ್ಕಾರಗಳಿಗೆ ಆದಿಯಿಲ್ಲ.

**ಅ॥ ಸ್ಮೃತಿ ಸಂಸ್ಕಾರಗಳನ್ನು ಪರಿಹರಿಸಿಕೊಳ್ಳುವುದಕ್ಕೆ ಉಪಾಯವನ್ನು ಹೇಳುತ್ತಾರೆ.**

೧೧. ಸೂ॥ ಹೇತು ಫಲಾಶ್ರಯಾಲಮ್ಬನೈ ಸ್ಸಂಗೃ ಹೀ ತತ್ವಾ ದೇಷಾ ಮಭಾವೇ ತದ ಭಾವಃ ॥

ತಾ॥ ಸ್ಮೃತಿ ಸಂಸ್ಕಾರಗಳಿಗೆ ಕಾರಣವಾದ ಅವಿದ್ಯಾದಿಗಳು, ಶರೀರ ಸ್ಮೃತ್ಯಾದಿಗಳು, ಚಿತ್ತವು, ಆದ ಇವುಗಳ ಅವಲಂಬನದಿಂದ ಸಂಗ್ರಹಿಸಿಕೊಂಡಿರುವುದರಿಂದ, ಈ ಅವಿದ್ಯಾದಿಗಳಿಲ್ಲದೆ ಹೋಗಿರುವಾಗ ಆ ಸ್ಮೃತಿ ಸಂಸ್ಕಾರಗಳು ನಾಶವಾಗುತ್ತವೆ.

ವಿ॥ ಸ್ಮೃತಿ ಸಂಸ್ಕಾರಗಳಿಗೆ ಹೇತುಗಳಾದ ಅವಿದ್ಯಾದಿಗಳು, ದೇಹ, ಚಿತ್ತ, ಇವು ಯೋಗ ಜ್ಞಾನದಿಂದ ಲಯಿಸಿ ಹೋದರೆ ಸ್ಮೃತಿ ಸಂಸ್ಕಾರಗಳು ನಿರ್ಮೂಲವಾಗುತ್ತವೆ.

**ಅ॥ ಚಿತ್ತ ವಾಸನೆಗಳ ಕಾರ್ಯಕಾರಣಗಳು ನಶಿಸುವುದರಿಂದ ಸ್ಮೃತಿ ಸಂಸ್ಕಾರಗಳು ನಿವರ್ತಿಯಾಗುತ್ತವೆಂದು ಹೇಳುತ್ತಾರೆ.**

೧೨. ಸೂ॥ ಅತೀ ತಾನಾಗ ತಂ ಸ್ವರೂಪತೋಽಸ್ತ್ಯಧ್ವ ಭೇದಾ ದ್ಧರ್ಮಾಣಾಮ್ ॥

ತಾ|| ಚಿತ್ತ ಧರ್ಮಗಳಾದ ಸ್ಮೃತಿ ಸಂಸ್ಕಾರಾದಿಳಿಗೆ ಮಾರ್ಗ ಭೇದಗಳಿಂದ ಗತಿಸಿಹೋಗುವಿಕೆಯು, ಮುಂದೆ ಬಂದು ಹೋಗುವಿಕೆಯು ಸ್ವಭಾವವಾಗಿಯೇ ಹುಟ್ಟಿವೆ.

ವಿ|| ಚಿತ್ತದಲ್ಲಿ ಸಂಸ್ಕಾರಾದಿ ಧರ್ಮಗಳಿಗೆ ಅನೇಕ ಮಾರ್ಗಗಳ ಭೇದದಿಂದ ಎಷ್ಟು ಕಾಲವು ಗತಿಸಿಹೋಗಿದ್ದರೂ, ಮರಳಿ ಅದು ಬರುವಿಕೆ ಸ್ವಭಾವಿಕ ವಾಗಿರುವುದರಿಂದ ಸ್ಮೃತಿ ಸಂಸ್ಕಾರಗಳಿಗೆ ಐಕಮತ್ಯವು ಕೂಡಿಯೇ ಇರುತ್ತದೆ. ಮಾರ್ಪಿನಿಂದ ನೂತನವಾಗಿ ಸ್ಮೃತಿ ಸಂಸ್ಕಾರಗಳು ಹುಟ್ಟುತ್ತ ದೆಂದರೆ, ಯಾವುದೂ ಮೂಲವಿಲ್ಲದೆ ಅಭಾವ ಪದಾರ್ಥದಿಂದ ಸತ್ತಾದ ಭಾವ ಪದಾರ್ಥಗಳು ಹುಟ್ಟುವುದಕ್ಕೆ ಕಾರಣವೇಯಿಲ್ಲ. ಅಭಾವ ಪದಾರ್ಥಗಳಿಗೆ ಭಾವ ಪದಾರ್ಥಗಳ ಸಂಬಂಧವು ಕೂಡುವಿಕೆಯುಯಿಲ್ಲ. ಆದುದರಿಂದ ಭಾವ ಪದಾರ್ಥಗಳಿಗೆ ನಾಶನವು ಅಭಾವ ಪದಾರ್ಥಗಳಿಗೆ ಉತ್ಪತ್ತಿಯು ಯಾವಾಗಲೂ, ಹುಟ್ಟುವುದಿಲ್ಲ. ಕ್ಲೃಪ್ತವಾಗಿಯೂ, ಕ್ರಮ ವಾಗಿಯೂ, ಹುಟ್ಟುವಂಥ ಧರ್ಮಗಳಿಂದ ನಾನಾ ವಿಧಗಳಾಗಿ ಪರಿಣಮಿ ಸುವ ಧರ್ಮಿ, ನಿರಂತರವು ಒಂದೇ ವಿಧವಾಗಿರುತ್ತದೆ. ಧರ್ಮಗಳು ಮಾತ್ರ ತಮ್ಮ ತಮ್ಮ ಮಾರ್ಗಗಳಲ್ಲಿ ಕ್ರಮ ಪ್ರಕಾರವಾಗಿ ಗತಿಸಿಹೋಗು ವಿಕೆಯು, ಹೀಗೆ ಧರ್ಮಗಳಿಗೆ ಅತೀತಾನಾಗತಾದಿ ಮಾರ್ಗ ಭೇದಗಳಿದ್ದ ರೂ, ಮತ್ತೆ ಮತ್ತೆ ಆ ಧರ್ಮ ಸ್ವರೂಪಗಳಿಂದಲೇ ಸ್ಮೃತಿ ಸಂಸ್ಕಾರಾದಿ ಗಳಿಗೆ (ಕಾರ್ಯ ಕಾರಣ ಭಾವವು) ಐಕಮತ್ಯವು ಸೇರುತ್ತಾ ಇರುತ್ತದೆ. ಧರ್ಮಿಯಾದ ಚಿತ್ತವು ಮೋಕ್ಷದವರೆಗೂ, ಸದಾ ಒಂದೇ ರೂಪವಾಗಿಯೇ ಇರುವುದರಿಂದ, ಈ ನಿಜಸಿದ್ಧಾಂತವನ್ನು ಮೋಸಗೊಳಿಸಿ ಬೇರೆ ವಿಧವಾಗಿ ಹೇಳುವುದಕ್ಕಾಗಲಾರದು.

**ಅ|| ಧರ್ಮ ಧರ್ಮಿ ಸ್ವರೂಪವನ್ನು ಭೋಧಿಸುತ್ತಾರೆ.**

೧೩. ಸೂ|| ತೇ ವ್ಯಕ್ತ ಸೂಕ್ಷ್ಮಾ ಗುಣಾತ್ಮಾನಃ ||

ತಾ|| ಸತ್ತ್ವಾದಿ ಗುಣಗಳ ಸ್ವರೂಪ ಆ ಧರ್ಮಿ ಧರ್ಮಗಳು ಸ್ಥೂಲಗಳಾಗಿಯು, ಸೂಕ್ಷ್ಮಗಳಾಗಿಯು ಇವೆ.

ವಿ|| ಧರ್ಮಿ ಧರ್ಮಗಳೆರಡು, ಸತ್ತ್ವಾದಿ ಗುಣಪರಿಣಾಮದಿಂದ ಸ್ಥೂಲಗ ಳಾಗಿಯೂ, ಸೂಕ್ಷ್ಮಗಳಾಗಿಯೂ ಇವೆ. ಪ್ರಕೃತಿ ಸಂಬಂಧವಾದ ಸಕಲ ವಸ್ತುಗಳು ಬಾಹ್ಯಾಭ್ಯಂತರ ಭೇದದಿಂದ ಬೇರೆಬೇರೆಯಾಗಿ ಸ್ಥೂಲ ಸೂಕ್ಷ್ಮಗಳನ್ನು ಹಿಡಿದು, ತಿಳಿಯುತ್ತಾಯಿದ್ದರೂ, ಭಾವ ವಸ್ತುಗಳಿಗೆ ಮಾತ್ರ ಪರಸ್ಪರವಾಗಿ ಕಾರ್ಯ ಕಾರಣ ಭಾವವು ಕೂಡುತ್ತದೆ. ಅಂದರೆ,

ಯಾವ ವಸ್ತುವು ಯಾವ ಆಕಾರವನ್ನು ಹೊಂದಿದೆಯೋ, ಆ ವಸ್ತುವು ಅದೇ ಆಕಾರವಾಗಿ ಪರಿಣಮಿಸುತ್ತದೆ. ಹೇಗೆಂದರೆ, ಘಟವು ಮಣ್ಣು ಎಂಬ ವಸ್ತುವಿನಿಂದ ಕೂಡಿರುವುದರಿಂದ ಆ ಘಟವು ಮಣ್ಣಿನ ಪರಿಣಾಮ ರೂಪವಾಗಿದೆ.

**ಅ॥ ತ್ರಿಗುಣಗಳು ಬೇರೆಬೇರೆಯಾದರೂ, ಧರ್ಮಿ ಮಾತ್ರ ಒಂದೇ ಎಂದು ಹೇಳುತ್ತಾರೆ.**

೧೪. ಸೂ॥ ಪರಿಣಾಮೈಕ ತತ್ವಾ ದ್ವಸ್ತು ಕತ್ತ್ವಮ್ ॥

ತಾ॥ ತ್ರಿಗುಣಗಳ ಪರಿಣಾಮದ ಐಕ್ಯದಿಂದ ಭಿನ್ನಭಿನ್ನ ರೂಪಗಳಾಗಿ ಪರಿಣಮಿಸಿರುವ ಪದಾರ್ಥಕ್ಕೆ ಏಕತ್ವವು (ಒಂದೇ ಎಂಬ ವ್ಯವಹಾರವು) ಆಗಿರುತ್ತದೆ.

ವಿ॥ ಗುಣಪರಿಣಾಮದಿಂದ ಪದಾರ್ಥವು ಬೇರೆಬೇರೆ ರೂಪಗಳನ್ನು ಹೊಂದಿದ್ದರೂ ಕೂಡ, ಆ ಗುಣಗಳು ಪರಿಣಾಮದ ಐಕ್ಯದಿಂದ ಆ ಪದಾರ್ಥವು ಒಂದೇ ಎಂದು ವ್ಯವಹಾರವು ಆಗಿರುತ್ತದೆ.

**ಯಾವ ರೀತಿಯೆಂದರೆ**—ಗುಣಗಳ ಪರಿಣಾಮದಲ್ಲಿ ಕೆಲವು ಕಡೆ ಸತ್ತ್ವಗುಣವು ದೇಹಿಯಾಗಿದ್ದರೆ ಮಿಕ್ಕ ರಾಜಸ ತಾಮಸ ಗುಣಗಳು ದೇಹವಾಗಿ (ಅಂಗವಾಗಿ)ರುತ್ತವೆ. ಕೆಲವು ಕಡೆ ರಾಜಸವು ದೇಹಿಯಾಗಿದ್ದರೆ, ಮಿಕ್ಕ ಸತ್ತ್ವ ತಮೋಗುಣಗಳು ದೇಹವಾಗಿರುತ್ತವೆ. ಆದುದರಿಂದ ಗುಣಗಳ ಪರಿಣಾಮದಿಂದ ಬೇರೆಬೇರೆಯಾಗಿರುವ ಪ್ರತಿಪದಾರ್ಥದಲ್ಲಿಯೂ, ಈ ತ್ರಿಗುಣಗಳು ಎಡಬಿಡದೆ ಇವೆ. ಆದುದರಿಂದ, ಆ ಪದಾರ್ಥವು ಒಂದೇ ಎಂದು ವ್ಯವಹರಿಸಲ್ಪಟ್ಟಿತು.

**ಹೇಗೆಂದರೆ**—ಪೃಥಿವಿ, ಜಲ, ಅಗ್ನಿ, ವಾಯು, ಆಕಾಶ ಮೊದಲಾದ ವಸ್ತುಗಳಲ್ಲಿ ಅಂಗಾಂಗಿ ಭಾವ ಸಂಬಂಧ (ಅಂದರೆ ದೇಹ ದೇಹೀ ಭಾವ ಸಂಬಂಧದಿಂದ) ಪ್ರತಿ ಪದಾರ್ಥದಲ್ಲಿಯೂ, ತ್ರಿಗುಣಗಳಿದ್ದರೂ ಆ ಪದಾರ್ಥಗಳು ಒಂದೇ ಪದಾರ್ಥವೆಂದು ವ್ಯವಹಾರವು ಸಿದ್ಧಿಸಿರುತ್ತದೆ.

**ಅ॥ ಧರ್ಮಿಯ ವಿವಿಧ ಭೇದಗಳಿಗೆ ಕಾರಣವನ್ನು ನಿರೂಪಿಸುತ್ತಾರೆ.**

೧೫. ಸೂ॥ ವಸ್ತು ಸಾಮ್ಯೇ ಚಿತ್ತ ಭೇದಾತ್ತಯೋ ರ್ವಿಭಕ್ತಃ ಪನ್ಥಾಃ ॥

ತಾ॥ ವಿಜ್ಞಾನಾರ್ಥಗಳಿಗೆ ಪದಾರ್ಥಗಳ ಸಮತ್ವದಲ್ಲಿ ಚಿತ್ತಗಳ ಭೇದದೆಶೆಯಿಂದ, ಅನೇಕ ಮಾರ್ಗಗಳು ಹುಟ್ಟಿರುತ್ತವೆ.

೭॥ ಪ್ರಕೃತಿಕಾರ್ಯವಾದ ಪದಾರ್ಥಗಳು, ಚಿತ್ತವು (ಅಂದರೆ ವಿಜ್ಞಾನ) ಕೂಡ ಒಂದೆಯಾದರೂ, ಲೋಕದಲ್ಲಿ ವಾಸನಾಬಲದಿಂದ ಅನೇಕ ಚಿತ್ತಗಳಿರುವುದರಿಂದ, ವಸ್ತುಗಳಿಗೂ, ಚಿತ್ತಗಳಿಗೂ ಅನೇಕಗಳಾದ ಮಾರ್ಗಗಳು ಹುಟ್ಟಿವೆ. ಆದುದರಿಂದ ವಿಜ್ಞಾನವ್ಯತಿರಿಕ್ತವಾದ ಪದಾರ್ಥಗಳಿವೆ.

**ಉದಾಹರಣೆ**—ಒಂದೇ ವಸ್ತುವಾದ ಸ್ತ್ರೀ ಒಬ್ಬ ಪುರುಷನಿಗೆ ಸಿಕ್ಕಿದ ಮೇಲೆ ಆ ಸ್ತ್ರೀ ಆ ಪುರುಷನಿಗೆ ಸುಖಕರವಾಗಿಯೂ, ಅದೇ ಸ್ತ್ರೀ ಸವತಿಗೆ ದುಃಖಕರವಾಗಿಯೂ, ಸನ್ಯಾಸಿಗೆ ನಿಂದಿತಳಾಗಿಯೂ, ಇರುತ್ತಾಳೆ. ಆದ್ದರಿಂದ ಆ ಸ್ತ್ರೀ ಒಂದೇ ವಸ್ತುವಾದರೂ, ಪರರ ಚಿತ್ತಗಳ ವಾಸನಾ ಭೇದದಿಂದ ಅನೇಕ ವಿಧಗಳಾಗಿ ಕಾಣುತ್ತಾ ಇರುತ್ತಾಳೆ. ಜ್ಞಾನವ್ಯತಿರಿಕ್ತವಾದ ವಸ್ತುಗಳಿಲ್ಲದೆ ಹೋದರೆ, ಒಂದೇ ವಸ್ತುವು ಒಂದೇ ಚಿತ್ತಕ್ಕೆ ಸುಖವನ್ನು, ಬೇರೆಯೊಂದು ಚಿತ್ತಕ್ಕೆ ದುಃಖವನ್ನು, ಇನ್ನೊಂದು ಚಿತ್ತಕ್ಕೆ ಅಸಹ್ಯವನ್ನು ಹುಟ್ಟಿಸುವುದಕ್ಕೆ ಕಾರಣವಿಲ್ಲವಾದುದರಿಂದ ವಿಜ್ಞಾನ ವ್ಯತಿರಿಕ್ತವಾದ ವಸ್ತುಗಳಿವೆಯೆಂದು ಗೋಚರಿಸುತ್ತವೆ. ಮತ್ತು ಎಲ್ಲರ ಚಿತ್ತಗಳು ಒಂದೇರೀತಿಯಾಗಿವೆಯೆಂದು ಹೇಳುವಾಗ, ಒಬ್ಬನ ಚಿತ್ತವು ಒಂದು ಕಾರ್ಯದಲ್ಲಿ ಆಸಕ್ತಿ ವಹಿಸಿರುವಾಗ ಎಲ್ಲರ ಚಿತ್ತಗಳು ಅದೇ ಕಾರ್ಯದಲ್ಲಿ ಆಸಕ್ತಿವಹಿಸಿರಬೇಕಾಗುತ್ತದೆ. ಹಾಗಿಲ್ಲವಾದ್ದರಿಂದ, ವಿಜ್ಞಾನ ವ್ಯತಿರಿಕ್ತವಾದ ವಸ್ತುಗಳಿರಬೇಕಾಗಿವೆ. ಒಂದು ಸಮಯದಲ್ಲಿ ಒಂದೇ ಚಿತ್ತವು ಏಕಕಾಲದಲ್ಲಿ ಭಿನ್ನಭಿನ್ನಗಳಾದ ಅನೇಕ ಕಾರ್ಯಗಳನ್ನು ಮಾಡದೆ ಹೋಗಬೇಕಾಗಿರುತ್ತವೆ. ಹಾಗೆ ಭೇದವಿಲ್ಲದೆ ಹೋಗುವುದಿಲ್ಲವಾದ್ದರಿಂದ, ವಿಜ್ಞಾನ ವ್ಯತಿರಿಕ್ತವಾದ ವಸ್ತುಗಳಿರಬೇಕಾಗುತ್ತವೆ. ಮತ್ತು ವಿಜ್ಞಾನಕ್ಕೆ ವ್ಯತಿರಿಕ್ತವಾದ ಕಾರ್ಯವೇಯಿಲ್ಲವೆಂದು ಹೇಳುವಾಗ (ಅಂದರೆ ಕಾರಣ ಭೇದದಿಂದ ಕಾರ್ಯ ಭೇದವಿಲ್ಲವೆಂದು ಹೇಳುವಾಗ) ಕಾರಣವಿಲ್ಲದೆಯೇ ವಿಜ್ಞಾನ ವ್ಯತಿರಿಕ್ತವಾದ ಈ ಜಗತ್ತು ಹುಟ್ಟಬೇಕಾಗಿಥೆ. ಹಾಗಿಲ್ಲವಾದ್ದರಿಂದ ವಿಜ್ಞಾನ, ವಸ್ತುವು, ಬೇರೆಬೇರೆಯಾಗಿ ಕಾಣಿಸುತ್ತದೆ. ಮತ್ತು ಕಾರಣಗಳು ಅಥವ ಚಿತ್ತಗಳು ಭಿನ್ನಭಿನ್ನವಾಗಿದ್ದರೂ, ಅವುಗಳಿಂದಾಗುವ ಕಾರ್ಯಕ್ಕೆ ಭಿನ್ನಭಿನ್ನರೂಪಗಳಿಲ್ಲವೆಂದು ಹೇಳಿದರೆ, ಆಗ ಜಗತ್ತೆಲ್ಲವೂ ಅನೇಕ ವಸ್ತುಗಳಾಗಿ ತೋರದೆ ಒಂದೇ ವಸ್ತುವಾಗಿ ಕಾಣಬೇಕಾಗಿರುವುದರಿಂದ, ವಿಜ್ಞಾನವಸ್ತುಗಳು ಬೇರೆಯೆಂದು ಸಿದ್ಧವಾಗುತ್ತವೆ.

ನಾನಾ ವಿಧಗಳಾಗಿರುವಿಕೆಯೇ ಈ ಪ್ರಪಂಚದ ಸ್ವಭಾವವೆಂದರೆ, ಆಗ ಈ ಪ್ರಪಂಚವು ಸ್ವಭಾವವಾದದ್ದಾಗುತ್ತದೆ. ಯಾದ್ದರಿಂದ, ಕಾರಣವಿಲ್ಲದೆಯೇ ಆಗಬೇಕಾಗುತ್ತದೆ. ಆದರೂ, ತ್ರಿಗುಣಾತ್ಮಕವಾದ ಪದಾರ್ಥ

ಗಳಿಂದ ಒಬ್ಬ ಪುರುಷನಿಗೆ ಅನೇಕ ಜ್ಞಾನಗಳು ಯಾವರೀತಿ ಹುಟ್ಟುತ್ತೆಂದರೆ—ವಸ್ತುವು ಹೇಗೆ ತ್ರಿಗುಣಾತ್ಮಕವೋ, ಹಾಗೆಯೇ ಚಿತ್ತವು ತ್ರಿಗುಣಾತ್ಮಕವಾಗಿದೆ. ಈ ಚಿತ್ತಕ್ಕೆ ಭಿನ್ನಭಿನ್ನಾರ್ಥಗಳು ಕಾಣಿಸುವುದಕ್ಕೆ ಪುಣ್ಯಪಾಪಗಳು ಸಹಕಾರಿಗಳಾಗಿವೆ. ಅದಕ್ಕೋಸ್ಕರ ಆ ಪುಣ್ಯಪಾಪಗಳ ವ್ಯತ್ಯಾಸದಿಂದ ವಸ್ತುಗಳು ಆಯಾ ರೂಪವಾಗಿ ಒಂದು ಚಿತ್ತಕ್ಕೆ ಅನೇಕ ಜ್ಞಾನಗಳು ಹುಟ್ಟುತ್ತವೆ. ಯಾವರೀತಿಯೆಂದರೆ—ಒಬ್ಬ ಪುರುಷನಿಗೆ ಒಂದೇ ವಸ್ತುವಾದ "ಸ್ತ್ರೀ" ವಿನಯ ಸದ್ವಚನಗಳಿಂದ ಸಂತೋಷವನ್ನುಂಟುಮಾಡುವಳಾಗಿಯೂ, ಕಲಹ ಕಠೋರ ವಚನಗಳಿಂದ ದುಃಖವನ್ನುಂಟುಮಾಡುವಳಾಗಿಯೂ, ದೂರದಲ್ಲಿರುವುದರಿಂದ ಮೋಹವನ್ನುಂಟುಮಾಡುವಳಾಗಿಯೂ, ಹೀಗೆ ಒಂದೇ ಚಿತ್ತಕ್ಕೆ ಒಂದೇ ವಸ್ತುವಿಷಯಕವಾದ ಅನೇಕ ಜ್ಞಾನಗಳು ಹುಟ್ಟುತ್ತವೆಯಾದ್ದರಿಂದ, ವಿಜ್ಞಾನ ವ್ಯತಿರಿಕ್ತವಾದ ವಸ್ತುಗಳಿವೆಯೆಂದು ಸಿದ್ಧಾಂತಿತವಾಗಿವೆ. ಇಲ್ಲಿ ವಿಜ್ಞಾನಕ್ಕೂ ಅರ್ಥಕ್ಕೂ ತಾದಾತ್ಮ್ಯವನ್ನು ಹೇಳುವ ಪಕ್ಷದಲ್ಲಿ ಕಾರ್ಯಕಾರಣಭಾವವು ಘಟಿಸುವುದಿಲ್ಲ. ಮತ್ತು ಭಿನ್ನಭಿನ್ನ ಕಾರಣಗಳಿದ್ದರೂ, ಕಾರ್ಯಕ್ಕೆ ಅಭೇದವನ್ನು ಹೇಳಿದರೆ ಅತಿಪ್ರಸಂಗವಾಗುತ್ತಾದ್ದರಿಂದ ವಿಜ್ಞಾನ ವ್ಯತಿರಿಕ್ತವಾದ ವಸ್ತುಗಳಿವೆಯೆಂದು ಸ್ಥಾಪಿಸಲ್ಪಟ್ಟದೆ.

**ಅ॥ ಇಂದ್ರಿಯಗಳ ಮೂಲಕ ಚಿತ್ತಕ್ಕೆ ವಸ್ತುಗಳು ಗೋಚರಿಸುವುದನ್ನು ಕುರಿತು ವಿವರಿಸುತ್ತಾರೆ.**

೧೬. ಸೂ॥ ತದುಪರಾಗಾಪೇಕ್ಷಿತತ್ವಾಚ್ಚಿತ್ತಸ್ಯ ವಸ್ತು ಜ್ಞಾತಾಜ್ಞಾತಮ್ ॥

**ತಾ॥ ಆ ವಸ್ತುಗಳ ರೂಪಗಳನ್ನು ಕಾಣಿಸುವುದರ ಮೂಲಕ ಅಪೇಕ್ಷಿಸುವುದರಿಂದ, ಚಿತ್ತಕ್ಕೆ ವಸ್ತುವು ತಿಳಿಯತಕ್ಕದ್ದು, ತಿಳಿಯದೆ ಇರತಕ್ಕದ್ದು ಕೂಡ ಆಗುತ್ತದೆ.**

ವಿ॥ ವಸ್ತುಗಳು ತಮ್ಮತಮ್ಮ ರೂಪಗಳನ್ನು ಇಂದ್ರಿಯಗಳ ದ್ವಾರಾ ಜ್ಞಾನಕ್ಕೆ ಕಾಣಿಸುವುದರಿಂದ, ಚಿತ್ತಕ್ಕೆ ವಸ್ತುಗಳು ಗೋಚರಕ್ಕೆ ಬಂತೆಂಬ ವ್ಯವಹಾರವು; ಹಾಗೆ ಕಾಣದೆಯಿರುವುದಕ್ಕೆ ಕಾಣಲಿಲ್ಲವೆಂಬ ವ್ಯವಹಾರವು, ಆಗಿದೆ. ಅಂದರೆ, ಯಾವ ಪದಾರ್ಥಕ್ಕೂ ಜ್ಞಾನಕ್ಕೂ ಸಾಕ್ಷಾತ್ಸಂಬಂಧವು ಹುಟ್ಟಿದೆಯೋ, ಅದನ್ನು ನೋಡಿದೆಯೆಂಬ ವ್ಯವಹಾರವು; ಹಾಗಿಲ್ಲದ್ದನ್ನು ನೋಡಲಿಲ್ಲವೆಂಬ ವ್ಯವಹಾರವು ಆಗಿರುತ್ತದೆ. ಆದ್ದರಿಂದ, ಸರ್ವದಾ ಸಮಸ್ತವು ಗೋಚರಕ್ಕೆ ಬರಲಾಗಲಾರದು. ಮತ್ತು ಅನುಭವಿ

ಪಲ್ಪಟ್ಟ ವಿಷಯಗಳಿಗೆ ಸಮಾನವಾದ ವಿಷಯಗಳ ಗೋಚರದಿಂದ, ಚಿತ್ತದಲ್ಲಿರುವ ಸಂಸ್ಕಾರವು ಉದ್ಬೋಧನೆ ವಹಿಸಿ, ಅದರಿಂದ ಆ ವಿಷಯಕವಾದ ಸ್ಮೃತಿ ಹುಟ್ಟುತ್ತದೆಯೇ ಹೊರತು, ಉದ್ಬೋಧಕ ಸಾಮುಗ್ರಿಯಿಲ್ಲದೆ ಸರ್ವದಾಸ್ಮೃತಿ ಹುಟ್ಟುವುದಿಲ್ಲ. ಆದುದರಿಂದ ಏಕಕಾಲದಲ್ಲಿಯೇ ವಸ್ತುಗೋಚರವು ಸ್ಮೃತಿಯೂ, ಹುಟ್ಟಗೊಳಿಸದಾಗಿದೆ.

**ಅ॥ ಚಿನ್ಮಾತ್ರನಾದ ಪುರುಷನು ಗ್ರಹೀತೃವೆಂದೂ, ಪರಿಣಾಮವನ್ನು ಹೊಂದದವನೆಂದೂ ಹೇಳುತ್ತಾರೆ.**

೧೭. ಸೂ॥ ಸದಾ ಜ್ಞಾತಾ ಶ್ಚಿತ್ತವೃತ್ತಯ ಸ್ತತ್ಪ್ರಭೋಃ ಪುರುಷಸ್ಯಾ ಪರಿಣಾಮಾತ್ ॥

ತಾ॥ ಆ ಚಿತ್ತದ ಅಧಿಪತಿಯಾದ ಚಿನ್ಮಾತ್ರನಾದ ಪುರುಷನಿಗೆ ಪರಿಣಾಮವಿಲ್ಲವಾದ್ದರಿಂದ ಚಿತ್ತದ ವೃತ್ತಿಗಳು ನಿರಂತರವು ತಿಳಿಯತಕ್ಕಂಥಾವುಗಳಾಗಿವೆ.

ವಿ॥ ಚಿತ್ತಕ್ಕೆ ಪ್ರಭುವಾದ ಪುರುಷನಿಗೆ ಪರಿಣಾಮಾದ್ಯವಸ್ಥೆಗಳಿಲ್ಲದ್ದರಿಂದ ಆ ಚಿತ್ತವೃತ್ತಿಗಳನ್ನು ಸದಾ ನೋಡುತ್ತಾ ಇರುತ್ತಾನೆ. ಪುರುಷನು ಪರಿಣಾಮವುಳ್ಳವನಾಗಿದ್ದರೆ ಚಿತ್ತವೃತ್ತಿಗಳು ತಿಳಿಯದೆ ಹೋಗಬೇಕಾಗಿ ಬರುತ್ತದೆ.

ಆದರೂ ಪುರುಷನು ಚಿತ್ತಕ್ಕೆ ಆಧಾರಭೂತನಾಗಿರುವುದರಿಂದ ಚಿತ್ತವು ಯಾವ ವಿಷಯಗಳ ವಸ್ತುಗಳಲ್ಲಿ ಸೇರುತ್ತದೆಯೋ, ಆಯಾ ವಿಷಯಗಳ ವಸ್ತುಗಳೆಲ್ಲವನ್ನೂ ಪುರುಷನು ನೋಡುತ್ತಾ ಯಿರುತ್ತಾನಾದ್ದರಿಂದ ಪುರುಷನಿಗೆ ಪರಿಣಾಮಾದಿ ಧರ್ಮಗಳಿಲ್ಲ.

**ಅ॥ ಚಿನ್ಮಾತ್ರನಾದ ಪುರುಷನ ಪ್ರಯೋಜನವನ್ನು ಹೇಳುತ್ತಾರೆ.**

೧೮. ಸೂ॥ ನತತ್ಸ್ವಾ ಭಾಸಂ ದೃಶ್ಯ ತ್ವಾತ್ ॥

ತಾ॥ ಆ ಚಿತ್ತವು ಪುರುಷನಿಗೆ ದೃಶ್ಯವಾಗಿರುವುದರಿಂದ ಸ್ವಪ್ರಕಾಶಕವಾದದ್ದು.

ವಿ॥ ಚಿತ್ತವು ಚಿನ್ಮಾತ್ರನಾದ ಪುರುಷನಿಗೆ ಕಾಣಿಸುವಂಥ ಪದಾರ್ಥವಾಗಿರುವುದರಿಂದ, ಕಾಣಿಸುವಂಥ ಘಟ ಪಟಾದಿಗಳ ಹಾಗೆ ಸ್ವಪ್ರಕಾಶವಾದದ್ದಲ್ಲ. ಅಂದರೆ ತನ್ನನ್ನು ಪ್ರಕಾಶಗೊಳಿಸುಕೊಳ್ಳದ್ದಲ್ಲ ಹೀಗೆನ್ನುವುದರಿಂದ ಸ್ವಯಂ ಪ್ರಕಾಶಕವಾದದ್ದೆಂದು ತಿಳಿಯತಕ್ಕದ್ದು.

**ಅ॥ ಚಿತ್ತದ ಸ್ವಭಾವಸ್ಥಿತಿಯನ್ನು ವಿವರಿಸುತ್ತಾರೆ.**

೧೯. ಸೂ॥ ಏಕ ಸಮಯೇ ಚೋ ಭಯಾ ನವಧಾರಣಮ್ ॥

ತಾ|| ಒಂದೇ ಕಾಲದಲ್ಲಿಯೇ ಸ್ವರೂಪವನ್ನೂ, ವಸ್ತುವನ್ನೂ ಕೂಡ ಗ್ರಹಿಸುವುದಕ್ಕೆ ಸಾಧ್ಯವಿಲ್ಲ.

ವಿ|| ಒಂದೇ ಸಮಯದಲ್ಲಿ ತನ್ನ ಸ್ವರೂಪವನ್ನೂ, ಇತರ ವಸ್ತುಗಳನ್ನೂ, ಗ್ರಹಿಸುವ ಶಕ್ತಿ ಚಿತ್ತಕ್ಕಿಲ್ಲವಾದ್ದರಿಂದ ಚಿತ್ತವು ಸ್ವಪ್ರಕಾಶವಾದದ್ದಲ್ಲ. ಮತ್ತು ನಾನು ಸುಖಿ, ನಾನು ದುಃಖಿ ಎಂಬ ವಿರುದ್ಧವಾದ ಎರಡು ವಿಧ ಜ್ಞಾನಗಳು ಒಂದೇ ಕಾಲದಲ್ಲಿ ಹುಟ್ಟುವುದಿಲ್ಲ. ಇದೂ ಅಲ್ಲದೆ ತನ್ನ ಸ್ವರೂಪವನ್ನು ಇತರರ ಸ್ವರೂಪವನ್ನೂ ಕೂಡ ಒಂದೇ ಸಲ ತಿಳಿಯಲಾಗುವುದಿಲ್ಲ; ಆದ್ದರಿಂದ ಚಿತ್ತವು ಸ್ವಪ್ರಕಾಶವಾದದ್ದಲ್ಲ. ಆದರೂ ದೃಶ್ಯವಾಗಿದೆಯೆಂದು ತಿಳಿಯಬೇಕು.

**ಅ|| ಚಿತ್ತಕ್ಕೆ ಸ್ವತಃ ಯೋಗ್ಯತೆಯಿದೆಯೆಂದು, ಬೇರೆ ಬುದ್ಧಿಯಿಂದ ಯೋಗ್ಯತೆ ಹುಟ್ಟುವುದಿಲ್ಲವೆಂದು ಹೇಳುತ್ತಾರೆ.**

೨೦. ಸೂ|| ಚಿತ್ತಾನ್ತರ ದೃಶ್ಯೇ ಬುದ್ಧೇ ರತಿಪ್ರಸಙ್ಗ
ಸ್ಮೃತಿ ಸಂಕರಶ್ಚ ||

ತಾ|| ಬುದ್ಧಿಗೆ ಸ್ವಪ್ರಕಾಶವಿಲ್ಲದೆ ಹೋದರೂ, ಬೇರೆ ಬುದ್ಧಿಯಿಂದ ದರ್ಶನ ಯೋಗ್ಯತೆ ಹುಟ್ಟುತ್ತೆಂದರೆ ಅತಿ ಪ್ರಸಂಗವೆನ್ನಲ್ಪಡುತ್ತೆ. ಮತ್ತು ಸ್ಮೃತಿ ಮಿಶ್ರವಾಗಿ ಹೋಗುವುದು ಕೂಡ ಆಗುತ್ತದೆ.

ವಿ|| ಬುದ್ಧಿಗೆ ಬೇರೆ ಬುದ್ಧಿಯಿಂದ ಜ್ಞಾನವು ಆಗುತ್ತೆಂದರೆ, ಆ ಬುದ್ಧಿಗೆ ಬೇರೆಯೊಂದು ಬುದ್ಧಿಯಿಂದ ಜ್ಞಾನವುಂಟಾಗಲ್ಪಡುತ್ತದೆ. ಅದಕ್ಕೆ ಬೇರೆಯೊಂದರಿಂದಲೂ, ಅದಕ್ಕೆ ಮತ್ತೊಂದರಿಂದಲೂ, ಹೀಗೆ ಗುರಿಯಿಲ್ಲದೆ ಆಯುಸ್ಸು ಮುಗಿಯುವವರೆಗೂ, ಉತ್ತರವನ್ನು ಹೇಳಿದರೂ ಮುಗಿಯುವ ಹಾಗಿಲ್ಲವಾದ್ದರಿಂದ, ಅಧಿಕಪ್ರಸಂಗವಾಗುತ್ತದೆ. ಮತ್ತು, ಆ ಅನೇಕ ಬುದ್ಧಿಗಳ ಸಂಸ್ಕಾರಗಳಿಂದ ಹುಟ್ಟುವ ಬುದ್ಧಿ ಎಂಥಾದ್ದು? ಮತ್ತು ಎಂಥಾದ್ದಾಗಿದೆ? ಇದು ಯಾವ ಬುದ್ಧಿಯಿಂದ ಹುಟ್ಟಿದೆ? ಎಂದು ತಿಳಿಯದೆ ತಾನು ಏನು ಮಾಡಬೇಕೆಂಬುದು ತೋರದೆ ಹೋಗುವುದರಿಂದ ಮುಕ್ತಿಪರ್ಯಂತರವು ಒಂದೇ ಚಿತ್ತವಿದೆಯೆಂದು ತಿಳಿಯತಕ್ಕದ್ದು.

**ಅ|| ಬುದ್ಧಿಗೆ ಸ್ವಯಂ ವ್ಯವಹಾರ ಜ್ಞಾನ ಹುಟ್ಟುವುದಕ್ಕೆ ಕಾರಣ ಏಂಥದ್ದೆಂದು ಹೇಳುತ್ತಾರೆ.**

೨೧. ಸೂ|| ಚಿತೇರ ಪ್ರತಿ ಸಂಕ್ರಮಾಯಾಸ್ತದಾ ಕಾರಾ ಪತ್ತೌ
ಸ್ವಬುದ್ಧಿ ಸಂವೇದನಮ್ ||

ತಾ|| ಮಿಶ್ರವಲ್ಲದ ಚಿತ್ಪ್ರಕಾಶಕ್ಕೆ, ಆ ಚಿತ್ತದ ರೂಪ ಪ್ರಾಪ್ತಿಯಲ್ಲಿ ಚಿತ್ತದಲ್ಲಿರುವ ಬುದ್ಧಿಗೆ ತಿಳಿವಳಿಕೆ ಹುಟ್ಟುತ್ತದೆ.

ವಿ|| ಅಂಗಾಂಗೀ ಭಾವದಿಂದ ಪರಸ್ಪರ ಮಿಶ್ರವಾಗದೆ ಇರುವ ಚಿತ್ಪ್ರಕಾಶವು, ಯಾವಾಗ ಚಿತ್ಸ್ವರೂಪವುಳ್ಳದ್ದಾಗುತ್ತಿದೆಯೋ, ಆಗ ಚಿತ್ತವು ಸ್ವಸ್ವರೂಪವನ್ನು ಹೊಂದುತ್ತದೆ.

**ಅಂಗಾಂಗೀ ಭಾವವೆಂದರೆ**—ಪ್ರಸರಿಸುತ್ತಿರುವ ಪರಮಾಣುಗಳು ಯಾವರೀತಿಯಾಗಿ ವಸ್ತುವಿನಲ್ಲಿ ಕೂಡಿಕೊಳ್ಳುತ್ತಿವೆಯೋ, ಹಾಗೆ ಚಿತ್ಪ್ರಕಾಶವು ಚಿತ್ತಾಕಾರವನ್ನು ವಹಿಸುತ್ತದೆ. ಆಗ ಬುದ್ಧಿಗೆ ಸ್ವಸ್ವರೂಪ ಜ್ಞಾನವುಂಟಾಗುತ್ತದೆ.

**ಅ|| ಚಿತ್ಪ್ರಕಾಶದಲ್ಲಿ ಕೂಡಿರುವ ಚಿತ್ತವು ಸಕಲ ವ್ಯವಹಾರಗಳನ್ನು ನಿರ್ವಹಿಸುತ್ತದೆಂದು ಹೇಳುತ್ತಾರೆ.**

೨೨. ಸೂ|| ದ್ರಷ್ಟೃ ದೃಶ್ಯೋಪರಕ್ತಂ ಚಿತ್ತಂ ಸರ್ವಾರ್ಥಮ್ ||

ತಾ|| ಚಿದ್ರೂಪ ಪುರುಷನು, ವಿಷಯವು ಎಂಬೀ ಯರಡರಿಂದ ಗೂಡಿದ ಚಿತ್ತವು ಸಕಲ ವಿಷಯಗಳನ್ನೂ ಗ್ರಹಿಸುವಂಥ ಶಕ್ತಿಯುಳ್ಳದ್ದಾಗಿರುತ್ತದೆ.

ವಿ|| ಚಿತ್ಪ್ರಕಾಶದಲ್ಲಿ ಕೂಡಿರುವ ಚಿತ್ತವು, ದೃಶ್ಯಪದಾರ್ಥದ ಹಾಗೆ ಪರಿಣಮಿಸುವುದರಿಂದ ಬುದ್ಧಿಗೆ ಸಕಲ ವ್ಯವಹಾರಜ್ಞಾನವುಂಟಾಗುತ್ತದೆ.

ಹೇಗೆಂದರೆ—ನಿರ್ಮಲವಾದ ಕನ್ನಡಿಯೇ ಮೊದಲಾದಂಥಾವುಗಳಿಗೆ ಪ್ರತಿಬಿಂಬ ಗ್ರಹಣಶಕ್ತಿಯಿದ್ದಹಾಗೆ, ರಜಸ್ತಮೋಗುಣಗಳ ಸಂಬಂಧವಿಲ್ಲದೆ ಶುದ್ಧ ಸತ್ತ್ವಗುಣ ಮಾತ್ರವುಳ್ಳ ಬುದ್ಧಿ, ಚಿತ್ಪ್ರಕಾಶವನ್ನು ಗ್ರಹಿಸುತ್ತದೆ. ಈ ಬುದ್ಧಿ ನಿಶ್ಚಲವಾಗಿರುವ ದೀಪದಹಾಗೆ, ಸದಾ ಏಕರೂಪವಾದ ಪರಿಣಾಮವುಳ್ಳದ್ದಾಗಿ, ಚಿತ್ಪ್ರಕಾಶವನ್ನು ಗ್ರಹಿಸುವಂಥ ಶಕ್ತಿಯನ್ನುಂಟುಮಾಡಿಕೊಂಡಿರುವುದರಿಂದ, ಮೋಕ್ಷದವರೆಗೂ ಏಕಾಕಾರವಾಗಿದೆ.

ಅಯಸ್ಕಾಂತ ಸಮೀಪದಲ್ಲಿ, ಲೋಹಕ್ಕೆ ಸ್ವಕೀಯವಾಗಿ ಶಕ್ತಿಹುಟ್ಟಿ ಯಾವರೀತಿ ಚಲಿಸುತ್ತಿದೆಯೋ, ಹಾಗೆಯೇ ಚಿತ್ಪುರುಷನ ಸಾನ್ನಿಧ್ಯದಲ್ಲಿ ಚಿತ್ತದ ಸತ್ತ್ವ ಭಾಗವಾದ ಬುದ್ಧಿಗೆ ಶಕ್ತಿಹುಟ್ಟಿ, ಸಕಲ ವ್ಯವಹಾರವನ್ನು ನಿರ್ವಹಿಸುತ್ತದೆ.

ಈ ಶಾಸ್ತ್ರದಲ್ಲಿ ನಿತ್ಯೋದಿತಾ ಚಿಚ್ಛಕ್ತಿಯೆಂದೂ, ಅಭಿವ್ಯಂಗ್ಯಾ ಚಿಚ್ಛಕ್ತಿಯೆಂದೂ, ಎರಡು ವಿಧಗಳಾದ ಶಕ್ತಿಗಳಿವೆ.

ಅವುಗಳಾವುವೆಂದರೆ—ಚಿತ್ಸ್ವರೂಪ ಪುರುಷನಲ್ಲಿರುವ ಶಕ್ತಿ ನಿತ್ಯೋದಿತಾ ಚಿಚ್ಛಕ್ತಿ. ಆ ಚಿತ್ಸ್ವರೂಪ ಪುರುಷನ ಸಾನ್ನಿಧ್ಯದಿಂದ ಅಭಿವ್ಯಕ್ತವಾದ ಚೈತನ್ಯವಿರುವ ಚಿತ್ತದಲ್ಲಿ ಶುದ್ಧಸತ್ತ್ವಭಾಗವು ಅಭಿವ್ಯಂಗ್ಯಾ ಚಿಚ್ಛಕ್ತಿ, ಇದು ಚಿದ್ರೂಪ ಪುರುಷನಿಗೆ ಅತಿಸಮೀಪದಲ್ಲಿರುವುದರಿಂದ, ಭೋಗ್ಯ ವಸ್ತುವಾಗಿದೆ. ಅಂದರೆ ಭೋಗವನ್ನನುಭವಿಸುವುದಕ್ಕೆ ಅನುಕೂಲವಾದ ವಸ್ತುವಾಗಿದೆಯೆಂದು ತಿಳಿಯಬೇಕು. ಈ ಅಭಿವ್ಯಂಗ್ಯ ಶಕ್ತಿಯನ್ನು ಸಾಂಖ್ಯರು ; ಪುರುಷನಿಗೂ ಪರಮಾತ್ಮನಿಗೂ, ಮಧ್ಯೆ ಆಶ್ರಯಭೂತವಾಗಿ ರುವ ಕರ್ಮಕ್ಕೆ ಅನುಗುಣವಾಗಿರುವಂಥಾದ್ದಾಗಿದ್ದು ಸುಖಭೋಗಾರ್ಥವಾದ ದ್ದಾಗಿದೆಯೆಂದು ಹೇಳುತ್ತಾರೆ.

ಚಿತ್ತದಲ್ಲಿ ಕರ್ಮಪರಿಪಾಕದಿಂದ ರಾಜಸ ತಾಮಸಗುಣಗಳು ಉದ್ರೇಕ ವಾದಾಗ, ಆಗುಣಗಳಲ್ಲಿ ಈ ಅಭಿವ್ಯಂಗ್ಯ ಶಕ್ತಿ ತನ್ನ ಆಕಾರವನ್ನು ಸಮರ್ಪಿಸುವಿಕೆಯಿಂದ ಅಥವ ಪ್ರತಿಫಲಿಸುವುದರಿಂದ ಆ ಗುಣಾನುರೂಪ ವಾದ ಕರ್ಮಫಲವನ್ನು ಈ ಅಭಿವ್ಯಂಗ್ಯ ಶಕ್ತಿ ಅನುಭವಿಸುತ್ತದೆ. ಮತ್ತು ಚಿತ್ತದಲ್ಲಿರುವ ರಜಸ್ತಮೋಗುಣಗಳು ಕೂಡ ಆ ಅಭಿವ್ಯಂಗ್ಯ ಶಕ್ತಿಯಿಂದ ಚೇತನವುಳ್ಳವಾಗಿ ದುಃಖಾದಿ ಕರ್ಮಗಳನ್ನನುಭವಿಸುತ್ತವೆ. ಕೆಲವರು ಈ ಸಕಲದುಃಖಗಳ ಫಲಗಳು ಈ ಸಾತ್ತ್ವಿಕಾದಿ ಗುಣಗಳಿಗೆ ಅತಿಸಮೀಪದಲ್ಲಿ ರುವ ಪುರುಷನಲ್ಲಿ ಆರೋಪಿಸುತ್ತಾರೆ.

ವಿಂಧ್ಯವಾಸಿಗಳಾದವರಲ್ಲಿ, ಕೆಲವರು ಈ ಅಭಿವ್ಯಂಗ್ಯ ಶಕ್ತಿಯನ್ನು ತತ್ತ್ವವೆಂದೂ, ಆತ್ಮನೆಂದೂ, ವ್ಯವಹರಿಸುತ್ತಾರೆ. ಮತ್ತು ಕೆಲವರು ಸತ್ತ್ವ ಭಾಗವು ಪುರುಷನ ಪ್ರತಿ ಬಿಂಬವನ್ನು ವಹಿಸಿರುತ್ತೆಂದೂ, ಈ ಪ್ರತಿಬಿಂಬವನ್ನು ರಜಸ್ತಮಗಳು ಕ್ರಮವಾಗಿ ವಹಿಸುತ್ತವೆಂದೂ, ಈ ಪರಂಪರೆಯ ಪ್ರತಿಬಿಂಬಗಳೆಲ್ಲವನ್ನೂ ಪ್ರತಿಬಿಂಬಗಳೆಂದೇ ವ್ಯವಹರಿಸು ತ್ತಾರೆ.

ಆದರೂ, ನಿಜವಾದ ಪ್ರತಿಬಿಂಬವು ಸತ್ತ್ವದಲ್ಲಿ ಮಾತ್ರವಿರುತ್ತದೆ. ಆಕಾರಾದಿಗಳಲ್ಲಿ ಚಿದ್ರೂಪ ಪುರುಷನು ನಿರ್ಮಲವಾದ ಸತ್ತ್ವದಲ್ಲಿ ಯಾವ ರೀತಿ ಪ್ರತಿ ಫಲಿಸುತ್ತಾನೆಂದರೆ,—ಆಕಾರ ಶೂನ್ಯವಾಗಿ ನಿರ್ಮಲದಿಂದ ವ್ಯಾಪಕವಾಗಿರುವ ಆಕಾಶವು ದರ್ಪಣಾದಿಗಳಲ್ಲಿ ಯಾವರೀತಿ ಪ್ರತಿಫಲಿ ಸುತ್ತದೆಯೋ, ಹಾಗೆ ಪುರುಷನು ಸಹಾ ನಿರ್ಮಲಸತ್ತ್ವದಲ್ಲಿ ಪ್ರತಿಫಲಿಸು ತ್ತಾನೆ. ಈ ಪ್ರತಿಫಲಿಸುವುದಕ್ಕೆ ಅಂದರೆ ಪ್ರತಿಬಿಂಬಕ್ಕೆ ಬಾಹ್ಯದಲ್ಲಿ ವಸ್ತುವಿಷಯಗಳ ಸಾಕ್ಷಾತ್ಕಾರದಿಂದ ಪುರುಷನು ಭೋಕ್ತೃವೆಂದು ಹೇಳು

ವುದು ಯುಕ್ತವಲ್ಲ. ಮತ್ತು ಪ್ರಕೃತಿ ಪರಿಣಮಿಸದೆ ಇದ್ದರೆ, ಆ ಸತ್ತ್ವ ಭಾಗವೇ ಹುಟ್ಟುವುದಿಲ್ಲವಾದ್ದರಿಂದ ಆಗ ಯಾವ ತೊಂದರೆಗೂ ಕಾರಣ ವಿಲ್ಲದೆಯಿರುವುದು.

ಈ ಪ್ರಕೃತಿ ಏತಕ್ಕೋಸ್ಕರ ಪರಿಣಮಿಸಬೇಕೆಂದರೆ—ಸ್ವಯಂ ಜಡವಾದ ದೇಹೇಂದ್ರಿಯಾದ್ಯವಯವಗಳು, ಅಂತರಾತ್ಮನಿಂದ ಚೇತನಜ್ಞಾನವುಳ್ಳ ದ್ದಾಗಿ, ಆ ಆತ್ಮನಿಮಿತ್ತ ಯಾವರೀತಿಯಾಗಿ ಸಮಸ್ತ ವ್ಯಾಪಾರಗಳನ್ನು ಸ್ವಕೀಯವಾಗಿಯೇ ನಿರ್ವಹಿಸುತ್ತದೆಯೋ, ಹಾಗೆ ಸ್ವಯಂ ಜಡವಾದ ಪ್ರಕೃತಿ ಚಿತ್ಪುರುಷನಲ್ಲಿರುವುದರಿಂದ ಚೇತನ ಜ್ಞಾನವುಳ್ಳದ್ದಾಗಿ, ಆ ಚಿತ್ಪುರುಷನಿಗೆ ಭೋಗವನ್ನು ಸಂಪಾದಿಸಿ ಕೊಡುತ್ತೇಂಬ ಸಂಕಲ್ಪದಿಂದ ಮಹದಾದಿ ಮಹಾಭೂತ ಪರ್ಯಂತವು ಅನುಲೋಮ ಪರಿಣಾಮವು ಹಿಂದೆಯೇ ಕ್ರಮವಾಗಿ ಯಾವ ರೀತಿ ಪರಿಣಮಿಸಿತ್ತೋ, ಅದೇ ಕ್ರಮವಾಗಿ ಹಿಂದೆ ಹಿಂದೆಯೇ ತಮ್ಮ ತಮ್ಮ ಕಾರಣಗಳಲ್ಲಿ ಲಯಹೊಂದುತ್ತಾ ಹೋಗುವಂಥ ವಿಲೋಮ ಪರಿಣಾಮವನ್ನು ಹೊಂದುವುದರ ಮೂಲವಾಗಿ ಪುರುಷನಿಗೆ ಭೋಗವನ್ನು ಹುಟ್ಟಿಸುವಿಕೆ ಪ್ರಕೃತಿಗೆ ಸ್ವಭಾವವಾದ ಕೆಲಸವಾಗಿದೆ. ಹೀಗೆ ಮೋಕ್ಷದವರೆಗೂ ಭೋಗವನ್ನು ಸಂಪಾದಿಸಿ ಕೊಡುತ್ತದೆ.

ಆದರೂ, ಪ್ರಕೃತಿಗೆ ಸ್ವಭಾವವಾಗಿಯೇ ಇಂಥ ಅನುಲೋಮ ವಿಲೋಮ ಪರಿಣಾಮಗಳು ಹುಟ್ಟುತ್ತಾಯಿದ್ದರೆ, ಈ ಪರಿಣಾಮಕ್ಕೆ ಪರ್ಯವಸಾನವಿಲ್ಲ ವಾದ್ದರಿಂದ ಮೋಕ್ಷವೆಂಬುದೇ ಇಲ್ಲದೆಹೋಗುವುದು. ಮತ್ತು ಮೋಕ್ಷೋಪ ದೇಶ ಶಾಸ್ತ್ರಾದಿಗಳಿಂದಲೂ, ಪ್ರಯೋಜನವಿಲ್ಲದೆ ಹೋಗುವುದು.

ಪ್ರಕೃತಿ ಪುರುಷರಿಗೆ ಭೋಗ್ಯ ಭೋಕ್ತೃ ಭಾವಸಂಬಂಧವು ಅನಾದಿ ಯಾಗಿದ್ದರೂ, ಚೇತನವನ್ನು ಹೊಂದಿರತಕ್ಕ ಪ್ರಕೃತಿಯ ಅಂಶವು ಕರ್ತೃತ್ವಾಭಿಮಾನದಿಂದ ದುಃಖಾದಿಗಳನ್ನನುಭವಿಸುತ್ತಾ ಯಿರುವಾಗ, ಈ ದುಃಖನಿವೃತ್ತಿ ಯಾವರೀತಿ ಹುಟ್ಟುತ್ತದೆಂಬ ಆಲೋಚನೆಯಿಂದ ಅವಶ್ಯಕವಾಗಿ ಮೋಕ್ಷದಲ್ಲಿ ಪ್ರಯತ್ನ ಹುಟ್ಟುತ್ತದೆ. ಇದೇ ಪ್ರಕಾರವಾಗಿ ಸಕಲ ಶಾಸ್ತ್ರಗಳಲ್ಲಿಯೂ, ಹೇಳಲ್ಪಟ್ಟಿದೆಯಾದ್ದರಿಂದ, ಚಿಚ್ಛಕ್ತಿಯನ್ನು ಹೊಂದಿರುವ ಬುದ್ಧಿ ತತ್ತ್ವವು ವಿಲೋಮ ಪರಿಣಾಮಕ್ರಮದಿಂದ ಕೈವಲ್ಯವನ್ನು ಹೊಂದುತ್ತಾಯಿರುತ್ತದೆ. ಅನುಲೋಮ ಪರಿಣಾಮ ಕ್ರಮದಿಂದ ಜಗದ್ವ್ಯಾಪಾರವೆಲ್ಲವನ್ನು ಸ್ವಕೀಯವಾಗಿ ನಿರ್ವಹಿಸುತ್ತದೆ. ಹೀಗೆ ಚಿತ್ತದ ಸ್ವರೂಪವನ್ನು ನಿರೂಪಿಸಿದೆಯಾದ್ದರಿಂದ ಇದರಿಂದ ಬೇರೆ ಯಾವ ವಿಧವಾದ ಆಕ್ಷೇಪಕ್ಕೂ ಅವಕಾಶವಿಲ್ಲ.

**ಅ॥ ಚಿತ್ತದಿಂದಲೇ ಸಕಲ ವ್ಯವಹಾರವು ಹುಟ್ಟುತ್ತೆಂದಮೇಲೆ ಪುರುಷನಿಂದ ಪ್ರಯೋಜನವೇನೆಂದು ವಿತರ್ಕಿಸುತ್ತಾರೆ.**

೨೪. ಸೂ॥ ತದ ಸಂಖ್ಯೇಯವಾಸನಾಭಿ ಶ್ಚಿತ್ರಮಪಿ
ಪರಾರ್ಥಂ ಸಂಹತ್ಯ ಕಾರಿತ್ವಾತ್ ॥

ತಾ॥ ಪ್ರಕೃತಿ ಪುರುಷನು ಸಹಾ ಮಿಶ್ರವಾಗಿ ಅರ್ಥ ಕ್ರಿಯೆಗಳನ್ನು (ಪ್ರಯೋಜನ ವ್ಯವಸಾಯುಗಳನ್ನು) ಮಾಡುವುದರಿಂದ, ಆ ಚಿತ್ತವು ಲೆಕ್ಕವಿಲ್ಲದಷ್ಟು ಸಂಸ್ಕಾರಗಳಿಂದ ನಾನಾ ವಿಧಗಳಾಗಿದ್ದರೂ, ಚಿನ್ಮಾತ್ರನಾದ ಪುರುಷನಿಗೆ ಭೋಗ ಮೋಕ್ಷರೂಪವಾದ ಪ್ರಯೋಜನವು ಹುಟ್ಟುತ್ತದೆ.

ವಿ॥ ಪುರುಷನ ಚೇತನವನ್ನು ಹೊಂದಿ ಹುಟ್ಟುವಂಥ ವ್ಯವಸಾಯವು, ಅದರ ಫಲವು ಕೂಡ ಪುರುಷನಿಗೆ ಪ್ರಯೋಜನಕಾರಿಯಾಗಿರುವುದರಿಂದ, ಕಾರಣ ಪುರುಷನೊಬ್ಬನಿದ್ದಾನೆಂದು ತಿಳಿದುಬರುತ್ತದೆ.

ಹೇಗೆಂದರೆ—ಅರ್ಥಕ್ರಿಯಾಕಾರಗಳಾದ ಭೋಜನ ಶಯ್ಯಾದಿಗಳು ಹೇಗೆ ಪರಪ್ರಯೋಜನಕರವಾಗಿವೆಯೋ, ಹಾಗೆಯೇ ಚಿತ್ತ ರೂಪಕವಾದ ಸತ್ತ್ವಾದಿ ಗುಣಗಳ ಪರಿಣಾಮ ಧರ್ಮಗಳೆಲ್ಲವೂ, ಪ್ರಯೋಜನಕರಗಳಾಗಿವೆ. ಯಾವನು ಪರನೋ, ಆತನೇ ಚಿನ್ಮಾತ್ರನಾದ ಪುರುಷನೆಂದು ತಿಳಿಯಬೇಕು. ಭೋಜನ ಶಯ್ಯಾದಿಗಳು ಶರೀರವಿರುವವರೆಗೂ ಪ್ರಯೋಜನಕರವಾಗಿವೆ. ಆ ಶರೀರಿಯಾದ ಪರನಿಗೆ ಪ್ರಯೋಜನವೇನೆಂದರೆ—ಸ್ಥೂಲಪದಾರ್ಥಗಳಿಂದ ಸ್ಥೂಲದೇಹಗಳಿಗೆ ದೃಷ್ಟಾಂತವನ್ನು ಹೇಳಿರುವುದರಿಂದ ನಿರ್ಮಲವಾದ ಶುದ್ಧಸತ್ತ್ವಗುಣವನ್ನು ಹಿಡಿದು, ನಿರ್ಮಲನಾದ ಪುರುಷನಿಗೆ ದೃಷ್ಟಾಂತವು ಹೇಳಲ್ಪಟ್ಟಿದೆಯಾದ್ದರಿಂದ, ಆಕ್ಷೇಪಕ್ಕೆ ಅವಕಾಶವಿಲ್ಲ. ನಮಗೆ ಆಗುತ್ತಿರುವ ಪ್ರತಿಯೊಂದೊಂದು ಪ್ರಯೋಜನವನ್ನು ಹಿಡಿದು, ಯಾರಿಗೆ ಆಗಿದೆಯೆಂದು ಕ್ರಮವಾಗಿ ವಿಭಜಿಸುತ್ತಾ ಹೋದಮೇಲೆ ಕಡೆಗೆ ಎಲ್ಲಿ ನಿಂತುಹೋಗುವುದೋ, ಅಲ್ಲಿಯೇ ಪುರುಷನಿದ್ದಾನೆಂದು ತಿಳಿಯುವುದು. ಹೇಗೆಂದರೆ—

ದೀಪವು ಯಾರಿಗೆ ಪ್ರಯೋಜನವಾದದ್ದೆಂದು ವಿಭಜಿಸುತ್ತಾ ಹೋದಮೇಲೆ ಮೊದಲು ಶರೀರಕ್ಕೆಂದು ತಿಳಿಯುತ್ತಾನೆ; ಆಮೇಲೆ ಕಣ್ಣುಗಳಿಗೆಂದು ತಿಳಿಯುತ್ತಾನೆ; ಆಮೇಲೆ ಬುದ್ಧಿಗೆಂದು ತಿಳಿಯುತ್ತಾನೆ. ಮರಳಿ ವಿಭಜನೆ ಮಾಡಿದರೆ ಆ ಬುದ್ಧಿಯಲ್ಲಿರತಕ್ಕ ಚೇತನಕ್ಕೆಂದು ತಿಳಿಯುವುದು.

ಆ ಚೇತನವು ಯಾರದೆಂದರೆ,- ಆತ್ಮದ್ದೆಂದು ತಿಳಿಯುತ್ತಾನೆ. ಆದುದರಿಂದ ಆ ಆತ್ಮನೆ ಚಿದ್ರೂಪ ಪುರುಷನಾದ್ದರಿಂದ; ಸಕಲ ಪ್ರಯೋಜನಗಳನ್ನು ಈ ಪ್ರಕಾರ ಚಿದ್ರೂಪ ಪುರುಷನನಿಮಿತ್ತವೆಂದು ತಿಳಿಯ ಬರುತ್ತಾದ್ದರಿಂದ, ಪುರುಷ ನಿದ್ದಾನೆಂದು ಚೆನ್ನಾಗಿ ತಿಳಿಯಬರುತ್ತದೆ.

ಚಿದ್ರೂಪನಿಗಿಂತ ಈಚೆಯೇ ಇವನ ಪ್ರಜ್ಞೆಯಿರುವುದರಿಂದ ಆ ಚಿದ್ರೂಪನಿಗಿಂತ ಮೇಲಿರುವ ನಿರ್ಗುಣಪರಬ್ರಹ್ಮನನ್ನು ಹೇಳುವುದಲ್ಲ. ಏತಕ್ಕೆಂದರೆ—ಆ ಪರಬ್ರಹ್ಮವು ವೇದಕ್ಕೂ, ವಾಕ್ಕಿಗೂ, ಅತೀತವಾಗಿರುವುದರಿಂದ ಹೇಳುವುದಕ್ಕೆ ಆಗಲಾರದೆಂದು ತಿಳಿಯಬೇಕು.

**ಅ॥ ಈ ಶಾಸ್ತ್ರಪ್ರಯೋಜನವಾದ ಕೈವಲ್ಯಸ್ವರೂಪನ್ನು (ಆತ್ಮನನ್ನು) ನಿರೂಪಿಸುತ್ತಾರೆ.**

೨೫. ಸೂ॥ ವಿಶೇಷ ದರ್ಶಿನ ಆತ್ಮಭಾವನಾ ನಿವೃತ್ತಿಃ ॥

ತಾ॥ ಚಿತ್ತವು ಬೇರೆಯೆಂದೂ, ಚಿದ್ರೂಪ ಪುರುಷನು ಬೇರೆಯೆಂದೂ, ಚೆನ್ನಾಗಿ ತಿಳಿದವನಿಗೆ; ಚಿತ್ತವೇ ಆತ್ಮನೆಂದು ಭಾವವಿಲ್ಲದೆ ಹೋಗುವುದು.

ವಿ॥ ಚಿತ್ತವು, ಪುರುಷನು ಬೇರೆಬೇರೆಯೆಂದು ಆಂತರಿಕದರ್ಶನದಿಂದ ತಿಳಿಯುವವನು ಚಿತ್ತವನ್ನು ಆತ್ಮನೆಂದೆಣಿಸಲಾರನು.

**ಅ॥ ಚಿತ್ತದಲ್ಲಿ ಆತ್ಮಭ್ರಾಂತಿ ನಿವೃತ್ತಿಯಾದಮೇಲೆ ಏನು ಹುಟ್ಟುತ್ತದೆಂಬುದನ್ನು ವಿವರಿಸುತ್ತಾರೆ.**

೨೬. ಸೂ॥ ತದಾ ವಿವೇಕ ನಿಮ್ನಂ ಕೈವಲ್ಯ ಪ್ರಾಗ್ಭಾರಂ ಚಿತ್ತಮ್ ॥

ತಾ॥ ಚಿತ್ತದಲ್ಲಿ ಆತ್ಮಭ್ರಾಂತಿ ಹೋದಮೇಲೆ, ವಿವೇಕರೂಪಜ್ಞಾನದಲ್ಲಿ ಅಂತರ್ಮುಖವಾಗಿರುವ ಚಿತ್ತವು ಮೋಕ್ಷದ ಪ್ರಾರಂಭದಲ್ಲಿರುತ್ತದೆ.

ವಿ॥ ಚಿತ್ತವೇ ಆತ್ಮನೆಂಬ ಭ್ರಾಂತಿ ನಿಶ್ಶೇಷವಾಗಿ ಹೋಗುವಾಗ, ವಿವೇಕ ಜ್ಞಾನದಲ್ಲಿ ಅಂತರ್ಮುಖವಾಗಿ (ವಿಶ್ರಾಂತಿ ಹೊಂದಿ) ಕೈವಲ್ಯ ಪದದ ಮೊದಲನೆಯ ಭಾಗದಲ್ಲಿರುತ್ತದೆ.

**ಅ॥ ವಿವೇಕಿಯ ಚಿತ್ತದಲ್ಲಿ ವಾಸನೆಗಳು ಹುಟ್ಟಲು ಕಾರಣವನ್ನು ಹೇಳುತ್ತಾರೆ.**

೨೭. ಸೂ॥ ತಚ್ಛಿದ್ರೇಷು ಪ್ರತ್ಯಯಾನ್ತ ರಾಣಿ ಸಂಸ್ಕಾರೇಭ್ಯಃ॥

ತಾ|| ವಿವೇಕ ಜ್ಞಾನದಲ್ಲಿ ಅಂತರ್ಮುಖನಾಗಿರುವವನಿಗೆ ವಿವೇಕ ಜ್ಞಾನದ ಅಂತರಾಳದ ಬಹಿರ್ಮುಖಕಾಲದಲ್ಲಿ ಹುಟ್ಟಿರುವ ವಾಸನೆಗಳಿಂದ ನಾನು, ನನ್ನದು, ನನಗೆ ಜ್ಞಾನ ಹುಟ್ಟಿದೆಯೆಂಬ ಬಹಿರ್ಮುಖ ಸಂಬಂಧ ವಾದ ಅಭಿಮಾನಗಳು ಹುಟ್ಟುತ್ತವೆ.

ವಿ|| ವಿವೇಕ ಜ್ಞಾನದಿಂದ ಅಂತರ್ಮುಖವಾಗಿರುವ ಚಿತ್ತದಲ್ಲಿ ಆಗಾಗ ಬಹಿರು ಕಾಲದಲ್ಲಿ ನಾನು ನನ್ನದು ಎಂಬ ಅಭಿಮಾನಗಳು ಹುಟ್ಟುತ್ತವೆ.

**ಅ|| ವಾಸನೆಗಳನ್ನು ತ್ಯಜಿಸುವುದಕ್ಕೆ ಉಪಾಯವನ್ನು ಹೇಳುತ್ತಾರೆ.**

೨೭. ಸೂ|| ಹಾನಮೇಷಾಂ ಕ್ಲೇಶವ ದುಕ್ತಮ್ ||

ತಾ|| ಅವಿದ್ಯಾದಿ ಕ್ಲೇಶಗಳನ್ನು ತ್ಯಜಿಸಿದಹಾಗೆ, ಈ ಸಂಸ್ಕಾರ ಗಳ ತ್ಯಾಗವನ್ನೂ ಹೇಳಲ್ಪಟ್ಟಿದೆ.

ವಿ|| ಅವಿದ್ಯಾದಿ ಕ್ಲೇಶಗಳನ್ನು ಬಿಟ್ಟಹಾಗೆ ಈ ಸಂಸ್ಕಾರಗಳನ್ನು ಬಿಡಬೇಕು.

**ಅ|| ವಾಸನಾ ನಿಗ್ರಹದಿಂದ ಲಭಿಸತಕ್ಕ ಮಹಾ ಫಲದ ಸ್ವರೂಪವನ್ನು ಹೇಳುತ್ತಾರೆ.**

೨೮. ಸೂ|| ಪ್ರಸಂಖ್ಯಾನೇಪ್ಯ ಕುಸೀದಸ್ಯ ಸರ್ವಥಾ ವಿವೇಕ ಖ್ಯಾತೇಃ ಧರ್ಮ ಮೇಘಸ್ಸಮಾಧಿಃ ||

ತಾ|| ಸಕಲ ತತ್ತ್ವಗಳ ನಿಜಸ್ವರೂಪಗಳನ್ನು ಚೆನ್ನಾಗಿ ಭಾವಿಸುತ್ತಾ ಪಲಾಪೇಕ್ಷೆಯಿಲ್ಲದವನಿಗೆ, ಸಕಲ ವಿಧಗಳಾಗಿರುವ ವಿವೇಕ ಜ್ಞಾನಕ್ಕೆ ಪುರುಷಾರ್ಥ ಸಾಧಕವಾದ ಪುಣ್ಯಪಾಪ ಧರ್ಮವನ್ನು ಸ್ಮರಿಸುವಂಥ ಸಮಾಧಿ ಹುಟ್ಟುತ್ತದೆ.

ವಿ|| ಸಮಸ್ತ ತತ್ತ್ವಗಳ ಸ್ವರೂಪ ವಿವೇಚನೆಯಿಂದ ಯಾವುದನ್ನೂ ಅಭಿಲಷಿಸದೆ ಸರ್ವತೋಮುಖವಾಗಿರುವ ವಿವೇಕಜ್ಞಾನವಿರುವಾತನಿಗೆ, ಪುಣ್ಯಪಾಪ ಸಂಬಂಧವಿಲ್ಲದ ನಿರತಿಶಯಾನಂದರೂಪವಾದ ಧರ್ಮ ಮೇಘವೆಂಬ ಸಮಾಧಿಯ ಮಹಾವರ್ಷವು ಸದಾ ಸುರಿಯುತ್ತದೆ. ಅಂದರೆ ನಿರವಧಿಕ ಪರಮಾನಂದ ಸಮಾಧಿ ಹುಟ್ಟುತ್ತದೆ.

**ಅ|| ಮೇಲೆ ಹೇಳಿದ ಧರ್ಮ ಮೇಘ ಸಮಾಧಿಯಿಂದ ಪ್ರಯೋಜನ ವಿಂಥದ್ದೆಂದು ಹೇಳುತ್ತಾರೆ.**

೨೯. ಸೂ|| ತತಃ ಕ್ಲೇಶ ಕರ್ಮ ನಿವೃತ್ತಿಃ ||

ತಾ|| ಆ ಸಮಾಧಿಯ ದಶೆಯಿಂದ ಅವಿದ್ಯಾದಿ ಕ್ಲೇಶಗಳು, ಪುಣ್ಯ ಪಾಪ ಕರ್ಮಗಳು ನಿವೃತ್ತಿಯಾಗುತ್ತವೆ

ವಿ|| ಆ ಧರ್ಮ ಮೇಘರೂಪವಾದ ಸಮಾಧಿಯಿಂದ, ಕ್ರಮವಾಗಿ ಸಕಲ ಕ್ಲೇಶ ಕರ್ಮಗಳು ನಾಶಹೊಂದುತ್ತವೆ.

**ಅ|| ಕ್ಲೇಶ ಕರ್ಮ ನಿವೃತ್ತಿಗೆ ಆಮೇಲೆ ಹುಟ್ಟುವಂಥಾದ್ದನ್ನು ಹೇಳುತ್ತಾರೆ.**

೩೦. ಸೂ|| ತದಾ ಸರ್ವಾವರಣ ಮಲಾಪೇತಸ್ಯ ಜ್ಞಾನಸ್ಯಾ
ನಂತ್ಯಾತ್ ಜ್ಞೇಯಮಲ್ಪಮ್ ||

ತಾ|| ಆಗೆ ಚಿತ್ತವನ್ನು ಸುತ್ತಿಕೊಂಡಿರುವ ಸಕಲ ಕ್ಲೇಶಕರ್ಮಗಳೆಂಬ ಕಲ್ಮಷದಿಂದ ಬಿಟ್ಟರತಕ್ಕ ಜ್ಞಾನಕ್ಕೆ ಪ್ರತಿಬಂಧವಿಲ್ಲದ್ದರಿಂದ, ತಿಳಿಯಬೇಕಾದ್ದು ಕೊಂಚವಾಗಿದೆ.

ವಿ|| ಜ್ಞಾನವನ್ನಾವರಿಸಿಕೊಂಡಿರುವ ಸಕಲ ಕ್ಲೇಶಕರ್ಮಗಳಿಲ್ಲದೆ ಹೋಗಿ ನಿರವಧಿಕವಾದ ಆಕಾಶದಹಾಗೆ ಸ್ಥಿರವಾದ ಜ್ಞಾನದಿಂದ ಸುಖಕರವಾಗಿ, ಅಡ್ಡವಿಲ್ಲದೆ ಸಮಸ್ತವು ತಿಳಿಯುತ್ತದೆ. ಅಂದರೆ ಸರ್ವಜ್ಞನಾಗುತ್ತಾನೆ.

**ಅ|| ಜ್ಞಾನಾನಂತರ ಹುಟ್ಟುವುದನ್ನು ಹೇಳುತ್ತಾರೆ.**

೩೧. ಸೂ|| ತತಃ ಕೃತಾರ್ಥಾನಾಂ ಪರಿಣಾಮ ಕ್ರಮಸಮಾಪ್ತಿ
ರ್ಗುಣಾನಾಮ್ ||

ತಾ|| ಆ ಜ್ಞಾನವು ಹುಟ್ಟಿದ ಅನಂತರದಲ್ಲಿ ಮಾಡುವಂಥ ಭೋಗಾಪವರ್ಗ ರೂಪ ಪುರುಷಾರ್ಥಗಳಿರತಕ್ಕ ಸತ್ತ್ವಾದಿ ಗುಣಗಳ ಮೋಕ್ಷದವರೆಗೂ ಹುಟ್ಟುವ ಅನುಲೋಮವಿಲೋಮ ಪರಿಣಾಮಗಳು, ಮುಂದೆ ವಿವರಿಸಿದ ಕ್ರಮದಲ್ಲಿ ಸಮಾಪ್ತಿಯಾಗುತ್ತವೆ.

ವಿ|| ವಿವೇಕ ಜ್ಞಾನವು ಸ್ಥಿರವಾದ ಮೇಲೆ ಪುರುಷ ಪ್ರಯೋಜನಕರಗಳಾದ ಗುಣಗಳ ಅನುಲೋಮ ವಿಲೋಮ ರೂಪ ಪರಿಣಾಮಗಳು ತೀರಿಹೋಗುತ್ತವೆ. ಆಗ ಚಿತ್ತವು ವಿಶ್ರಾಂತಿ ಹೊಂದುತ್ತದೆ.

**ಅ|| ಸತ್ತ್ವಾದಿ ಗುಣಗಳ ಪರಿಣಾಮ ಕ್ರಮವನ್ನು ನಿರೂಪಿಸುತ್ತಾರೆ.**

೩೨. ಸೂ|| ಕ್ಷಣ ಪ್ರತಿಯೋಗೀ ಪರಿಣಾಮಾ ಪರಾಂತ
ನಿರ್ಗ್ರಾಹ್ಯಃ ಕ್ರಮಃ ||

ತಾ॥ ಕ್ಷಣಗಳೇ ಶತ್ರುಗಳಾಗಿರುವ ಪರಿಣಾಮ (ಪರಿಪಾಕ) ಗಳಲ್ಲಿ ಹಿಂದೆ, ಮುಂದೆಂಬುದನ್ನು ಚೆನ್ನಾಗಿ ತಿಳಿಯತಕ್ಕದ್ದು. ಗುಣಪರಿಣಾಮ ಕ್ರಮವಾಗಿರುವುದು.

ವಿ॥ ಒಂದರನ್ನು ಬೇರೊಂದು ಹಿಂದೆ ಮಾಡುತ್ತಿರುವ ಪ್ರತಿಕ್ಷಣಗಳಲ್ಲಿಯೂ, ಪ್ರಧಾನ ತತ್ತ್ವವಾದ ಮೂಲಪ್ರಕೃತಿಯನ್ನು ಆಧಾರ ಮಾಡಿಕೊಂಡು ಪೃಥಿವ್ಯಾದಿ ಸ್ಥೂಲಭೂತಗಳವರೆಗೂ, ಅನುಲೋಮವಾಗಿ ಪರಿಣಾಮ ಹೊಂದುವ ಕ್ರಮವನ್ನು ; ಮತ್ತು ಪರಿಮಾಣ್ವಾದಿ ಮಹಾ ಭೂತಾಂತವು, ಮಹಾಭೂತಾದಿ ಪ್ರಧಾನ ತತ್ತ್ವಾಂತವು; ಕೂಡ ಸತ್ತ್ವಾದಿಗುಣಗಳ ಪರಿಣಾಮಕ್ರಮವೆನ್ನಲ್ಪಡುತ್ತದೆ.

**ಅ॥ ಪರಮ ಪುರುಷಾರ್ಥ ಸ್ವರೂಪವಾದ ಕೈವಲ್ಯ ಸ್ಥಿತಿಯ ಸ್ವರೂಪವನ್ನು ನಿರೂಪಿಸುತ್ತಾರೆ.**

೩೩. ಸೂ॥ ಪುರುಷಾರ್ಥಗುಣಾನಾಂ ಪ್ರತಿ ಪ್ರಸವೇ ಕೈವಲ್ಯಂ
ಸ್ವರೂಪ ಪ್ರತಿಷ್ಠಾ ವಾಚಿತಿ ಶಕ್ತಿರಿತಿ ॥

ತಾ॥ ಭೋಗ ಮೋಕ್ಷ ರೂಪಗಳಾದ ಪುರುಷಾರ್ಥಗಳುಳ್ಳ ಸತ್ತ್ವಾದಿ ತ್ರಿಗುಣಗಳ ಪುನರಾವೃತ್ತಿಯಿಲ್ಲದ ವಿಲೋಮ ಪರಿಣಾಮ ಸಮಾಪ್ತಿಯಾಗಲಿ ಇಲ್ಲವೆ, ಪುರುಷನಲ್ಲಿರುವ ಚಿತ್ರಕಾಶವು ಸ್ವಸ್ವ ರೂಪವಾದ ಸಚ್ಚಿದಾನಂದ ಮಯಾಖಂಡ ಪರಿಪೂರ್ಣವಾದ ಪರ ಬ್ರಹ್ಮನಲ್ಲಿ ನೆಲೆಸಿರುವಿಕೆಯಾಗಲಿ, ಕೈವಲ್ಯವೆನ್ನಲ್ಪಡುತ್ತದೆ.

ವಿ॥ ಪುರುಷಾರ್ಥರೂಪವಾದ ಭೋಗಾಪವರ್ಗಪರಿಣಾಮಗಳಿಲ್ಲದ ಸತ್ತ್ವಾದಿ ಗುಣಗಳ ವಿಲೋಮ ಪರಿಣಾಮಗಳು ಸಮಾಪ್ತಿಯಾಗುವಿಕೆಯೇ ಆ ನಿತ್ಯ ಕೈವಲ್ಯ ಸ್ವರೂಪನಾದ ಪುರುಷನಿಗೆ ಕೈವಲ್ಯವೆನ್ನಲ್ಪಡುತ್ತೆ. ಅಂದರೆ, ಪುರುಷನಲ್ಲಿರುವ ಚಿತ್ರಕಾಶವು ಅಖಂಡಾನಂತ ಪರಿಪೂರ್ಣ ಸಚ್ಚಿದಾನಂದ ಮಯದಲ್ಲಿ ಐಕ್ಯವಾಗುವಿಕೆಗೆ ಕೈವಲ್ಯವೆನ್ನಲ್ಪಡುತ್ತೆ.

ಇತಿ ಎಂಬ ಪದವು ಶಾಸ್ತ್ರ ಪರಿಸಮಾಪ್ತಿಯ ಅರ್ಥವನ್ನು ಹೇಳುತ್ತ ದೆಂದು ತಿಳಿಯತಕ್ಕದ್ದು.

ಪಾತಂಜಲಿ ಯೋಗಸೂತ್ರಗಳಲ್ಲಿ
ಕೈ ವ ಲ್ಯ ಪಾ ದ ವು
ಸಮಾಪ್ತ.

